# MADANA TILAKAM

by

CHANDRARAJA KAVI

*Edited by*

*Vidyaratna* R. S. Panchamukhi, M. A.,

*Director, Kannada Research Institute, Dharwar*

ಚಂದ್ರರಾಜಕವಿ ವಿರಚಿತಂ

# ಮದನತಿಲಕಂ

ಸಂಪಾದಕರು :

ವಿದ್ಯಾರತ್ನ ಆರ್. ಎಸ್. ಪಂಚಮುಖಿ, ಎಂ. ಎ.,

ಡಾಯರೆಕ್ಟರ, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ

KANNADA RESEARCH INSTITUTE, DHARWAR

1953

# MADANA TILAKAM

by

CHANDRARAJA KAVI

*Edited by*

*Vidyaratna* R. S. Panchamukhi, M. A.,

*Director, Kannada Research Institute, Dharwar*

ಚಂದ್ರರಾಜಕವಿ ವಿರಚಿತಂ

# ಮದನತಿಲಕಂ

ಸಂಪಾದಕರು :

ವಿದ್ಯಾರತ್ನ ಆರ್. ಎಸ್. ಪಂಚಮುಖಿ, ಎಂ. ಎ.,

ಡಾಯರೆಕ್ಟರ, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ

KANNADA RESEARCH INSTITUTE, DHARWAR

1953

ಪ್ರಕಾಶಕರು :
ಆರ್. ಎಸ್. ಪಂಚಮುಖಿ ಎಂ. ಎ.
ಡಾಯರೆಕ್ಟರ ಕನ್ನಡ ರಿಸರ್ಚ ಇನ್ಸ್ಟಿಟ್ಯೂಟ್,
ಧಾರವಾಡ

ಮಾ[illegible]೩



( ೧೦೦೦ ಪ್ರತಿಗಳು )

ಮುದ್ರಕರು :
ಎಸ್. ಎಮ್. ಕುಲಕರ್ಣಿ
ಲಲಿತ ಮುದ್ರಣಾಲಯ
ಧಾರವಾಡ

# ವಿಷಯಾನುಕ್ರಮಣಿಕೆ

# ಮದನತಿಲಕ

# ಉಪೋದ್ಘಾತ

ಇಲ್ಲಿ ಪ್ರಕಟಿಸಲ್ಪಟ್ಟ 'ಮದನತಿಲಕ' ವೆಂಬ ಕಾಮಶಾಸ್ತ್ರದ ಗ್ರಂಥ ವನ್ನು ಚಂದ್ರರಾಜ ಕವಿಯು ೧೧ನೆಯ ಶತಮಾನದ ಆದಿ ಭಾಗದಲ್ಲಿ ರಚಿಸಿದ ನೆಂದು ಉಪೋದ್ಘಾತದ ಪದ್ಯಗಳಿಂದ ಗೊತ್ತಾಗುತ್ತದೆ. ಕವಿ, ಅವನ ಪೋಷಕ, ರಾಜಕೀಯ ವಿದ್ಯಮಾನಗಳು ಈ ಬಗ್ಗೆ ಅನೇಕ ಸಂಗತಿಗಳು ಅಲ್ಲಿ ನಿರೂಪಿಸಲ್ಪಟ್ಟಿವೆ. ಅವುಗಳನ್ನು ವಿವರವಾಗಿ ಇಲ್ಲಿ ಮುಂದೆ ಚರ್ಚಿ ಸುತ್ತೇವೆ.

## ಗ್ರಂಥ ಸಂಸ್ಕರಣ

ಈ ಗ್ರಂಥಸಂಸ್ಕರಣದಲ್ಲಿ ಮದ್ರಾಸ ಸರಕಾರದ ಮ್ಯಾನುಸ್ಕ್ರಿಪ್ಟ ಲಾಯಬ್ರರಿ ಮತ್ತು ಮೈಸೂರು ಸರಕಾರದ ಓರಿಯಂಟಲ್ ರಿಸರ್ಚ ಇನ್ಸ್ಟಿ ಟ್ಯೂಟದ ಹಸ್ತಲಿಖಿತ ಗ್ರಂಥಸಂಗ್ರಹಾಲಯ ಇವುಗಳಲ್ಲಿದ್ದ ಮದನತಿಲಕದ ಕೈಬರೆಹದ ಪ್ರತಿಗಳನ್ನು ಉಪಯೋಗಿಸಿದ್ದೇವೆ. ಮೈಸೂರ ಹಸ್ತಪ್ರತಿಗೆ 'ಕ' ಎಂದೂ ಮದ್ರಾಸ ಪ್ರತಿಗೆ 'ಗ' ಎಂದೂ ಸಂಕೇತವನ್ನು ಕೊಟ್ಟಿದ್ದೇವೆ. ಅವೆರಡೂ ಪ್ರತಿಗಳಲ್ಲಿ ಕಂಡುಬರುವ ಪಾಠಭೇದಗಳನ್ನೂ ಪದ್ಯಗಳಲ್ಲಿರುವ ವ್ಯತ್ಯಾಸಗಳನ್ನೂ ಅಲ್ಲಲ್ಲಿ ಅಡಿ ಟಿಪ್ಪಣಿಗಳಲ್ಲಿ ತೋರಿಸಿದ್ದೇವೆ. ಇಲ್ಲಿ ಕೊಟ್ಟ ಮೂರು ಮತ್ತು ನಾಲ್ಕನೆಯ ಅಧಿಕಾರಗಳು ಮೈಸೂರು ಪ್ರತಿಯಲ್ಲಿ ಇಲ್ಲ. ಅವುಗಳನ್ನು ಮದ್ರಾಸ ಪ್ರತಿಯಿಂದ ಆರಿಸಿ ಇಲ್ಲಿ ಸೇರಿಸಿದ್ದೇವೆ. ಎರಡೂ ಪ್ರತಿಗಳಲ್ಲಿ ಪದ್ಯಗಳೂ ಪಾಠಗಳೂ ಬಹಳ ತ್ರುಟಿತವಾಗಿಯೂ ಅಶುದ್ಧ ವಾಗಿಯೂ ಇರುವದರಿಂದ ಅವುಗಳನ್ನು ಇದ್ದಕ್ಕಿದ್ದ ಹಾಗೆ ಕೊಟ್ಟು ಅವಶ್ಯ ಕಂಡಲ್ಲಿ ತಿದ್ದುಪಡಿಗಳನ್ನು ಸೂಚಿಸಿದ್ದೇವೆ. ಗ್ರಂಥ ಸಂಸ್ಕರಣದಲ್ಲಿ ಸಾಮಾನ್ಯ ವಾಗಿ ಅಶುದ್ಧವೆಂದು ಕಂಡುಬರುವ ಪಾಠಗಳನ್ನು ತಮಗೆ ತೋರಿದಂತೆ ತಿದ್ದಿ ಮೂಲಪಾಠಗಳನ್ನು ಮುಚ್ಚಿಬಿಡುವ ಪರಿಪಾಠವು ಸಾಮಾನ್ಯವಾಗಿ ಸಂಪಾ ದಕರಲ್ಲಿ ಕಂಡುಬರುವದು. ಅದರಿಂದ ಹಳೆಯ ಮೂಲಪಾಠಗಳ ಅಸ್ತಿತ್ವವೇ

ಇಲ್ಲದಂತಾಗಿ ಬರಬರುತ್ತ ಗ್ರಂಥಗಳು ಗುರುತು ಹಿಡಿಯದಷ್ಟು ವಿಪರ್ಯಾಸ ವನ್ನು ಹೊಂದುವವು. ಆದುದರಿಂದ ನಾವು ಸಾಮಾನ್ಯವಾಗಿ ಒಂದು ಪ್ರತಿ ಯನ್ನು ಅವಲಂಬಿಸಿ ಅಲ್ಲಿಯ ಪದ್ಯಗಳ ಪಾಠವನ್ನು ಮೇಲೆ ಕೊಟ್ಟು ಅನ್ಯ ಪ್ರತಿಗಳಲ್ಲಿ ತೋರುವ ವ್ಯತ್ಯಾಸಗಳನ್ನು ಅಡಿಯಲ್ಲಿ ನಿರ್ದೇಶಿಸಿದ್ದೇವೆ. ಇದ ರಿಂದ ಮೇಲೆ ಕೊಟ್ಟ ಪಾಠಗಳು ಶುದ್ಧ ಮತ್ತು ಸಾಧುವೆಂದು ನಮ್ಮ ಅಭಿ ಪ್ರಾಯವಲ್ಲ. ಬೇರೆ ಬೇರೆ ಪ್ರತಿಗಳಲ್ಲಿದ್ದ ಪದ್ಯ ಮತ್ತು ಪಾಠಗಳ ಕ್ರಮ ವನ್ನನುಸರಿಸಿ ಮೂಲವನ್ನೂ ಅಡಿ ಟಿಪ್ಪಣಿಗಳನ್ನೂ ತಯಾರಿಸಿದ್ದರಿಂದ ಒಟ್ಟು ಪಾಠಭೇದಗಳು ಎಷ್ಟು ? ಯಾವವು ? ಎಂಬುದನ್ನು ಗುರುತಿಸಲು ಶಕ್ಯವಾಗು ವದು.

ಕೆಲವೆಡೆಯಲ್ಲಿ ಅಡಿಯ ಪಾಠಗಳೇ ಶುದ್ಧವೂ ಸರಿಯಾದ ಅರ್ಥ ವುಳ್ಳವೂ ಆಗಿರುವವು. ಉದಾ :

| ಪುಟ | | ಮೇಲಿನ ಪಾಠ | | ಅಡಿಪಾಠ |
|---|---|---|---|---|
| ೧೬ | ಕ, | ಬಿಕ್ಕೈವುದಂ | ಗ, | ಬಿತ್ತುವುದಂ |
| ೨೦ | ಕ, | ಕಾಮುಕೃತಕಕಂದರ ಯತ್ನಂ | ಗ, | ಕಾಮುಕೃತಕ [ ರಾ ] ದರ ಯತ್ನಂ |
| ೩೨ | ಕ, | ಸಿಂಗರಿಸುತುಂ | ಗ, | ಸಿಟ್ಟುಸಿರುಂ |
| ,, | ಕ, | ಧಾತುಗೆಟ್ಟಂತುಮ್ಮಳ | ಗ, | ಧಾತುಸ್ಥಿತಿಯಪ್ಪಳಂ |
| ,, | ಕ, | ಂರಂತರದೊಳೆರಡನೆಯ | ಗ, | ಂರಂತರವೆರಡನೆಯ |
| ೩೩ | ಕ, | ಮಿಂದುಕಾಂತಮುಂ | ಗ, | ಮಿಂದುಕರಂಗಳು ಮಿಂದು ಕಾಂತಮುಂ |
| ೩೬ | ಕ, | ನಾಣ್ಮಿತಿ ನಿಂ | ಗ, | ನುಣ್ಮಾತಿನಿಂ |
| ,, | ಕ, | ನಿಸಾರಿನುದಾರಿ ಚಿತ್ತಮುಂ | ಗ, | ಕುಲಜ್ಞನುದಾರಿ ಚಿತ್ತಮುಂ |
| ೪೪ | ಕ, | ಪೆಡರುಂತೆ | ಗ, | ಪೆರರುಂತೆ |
| ೪೭ | ಕ, | ಮದರಿನ ಗಳ್ಪೊಡಪುವುದೆ | ಗ, | ಮದರಿನಗಳ್ದೆಡಪುವುದೆ |
| ೪೯ | ಕ, | ಪೂಯಿಲಿಡಹೋದ ಕುರಿಯಂತಕ್ಕುಂ | ಸೂ. ಸು. | ಪುಯ್ಯಲ್ಗೆ ಬಂದ ಕುಱಿಯಂತಕ್ಕುಂ |

| ಪುಟ | | ಮೇಲಿನ ಪಾಠ | | ಅಡಿಪಾಠ |
|---|---|---|---|---|
| ೫೨ | **ಕ,** | ಲಾಗಿಪ್ಪರ್ಷ್ಟ್ವಾಂಬೆ- ಯರ್ಕಳುಂ ತಪ್ಪಲ್ತು | **ಗ,** | ಲಾಗಿಪರ್ಪಾಂಬೆ ಯರ್ಕಳುಂ ತಪ್ಪಲ್ಕು |
| ೫೭ | ಕ, | ಸಜ್ಜನದೆರೆಯುವುಂ ಪೆರ- | ಸೂ. ಸು. | ಬೆಜ್ಜತನದೆಡೆಯುಮಂ ಪೆಱ |
| ೫೮ | ಕ, | ಪಸದನದೊಳವೊಡ ಗೂಡುವು | ಸೂ. ಸು. | ಬಸನದೊಳೋತೊಡ ಗೂಡುವು |
| ೬೩ | **ಕ** | ಕಡೆಗಣಿ ಪಳ್ಳೊಲ್ಲಮೆಗಳ | **ಗ** | ಕಡೆಗಳಿಸಲ್ಪೊಲ್ಲಮೆಗಳ |
| ,, | **ಕ** | ನಡಂ ನಿಪಳ್ಫಕ್ರಿಯೆನಿಪ | **ಗ** | ನಡಂಗಿಪಳ್ಭಕ್ತೆಯೆನಿಪ |
| ೭೮ | **ಕ** | ಮುನ್ನಮೆವಿಕ್ಕಿ | **ಗ** | ಮುನ್ನಮೇಲಿಕ್ಕಿ |
| ೮೩ | ಕ | ಮನದೆರಕ ಕಾಮನ ಬಳಕೆ ಯೊಳ್ ಮೆರೆಯಲ್ | **ಗ** | ಮನದೆರಕ ಮನಬಳತೆ ಯೊಳ್ಮೆರೆಯಲ್ |
| ೮೮ | **ಕ** | ಬಸುಪಿರಿದ | ಗ | ಬಿಸುಪೇರಿದ |
| ,, | ಕ | ಮುಕ್ಕುವೋಜೆಯುನು | ಗ | ಮುಕ್ಕುವೋಜೆಯಿಂ |
| ,, | **ಕ** | ಬೇಟದಿಂದತ್ಕಾಲಗಳಂ | **ಗ** | ಬೇಟದಿಂದತ್ತಲಗಳಂ (?) |
| ೮೯ | **ಕ** | ಕಲ್ವುದನುರಾಗದೆಸಕದಿಂ- ಗಿತವನತಂಗಳಂ | **ಗ** | ಕಲ್ವುದನುರಾಗದೆ ಸದ್ವಿಟ ನಿಂಗಿತಂಗಳಂ |
| ,, | **ಕ** | ರಕ್ತೆಯಿಪ್ಪಾಕೆ | **ಗ** | ರಕ್ತೆಯೆನಿಪ್ಪಾಕೆ |
| ೯೦ | **ಕ** | ಷೋಡಶಕಳಾಕಾಂತಿಚಂದ್ರಂ ಇಲ್ಲಿ ದ್ವಿತೀಯಾಕ್ಷರ ಪ್ರಾಸ ತಪ್ಪಿದೆ. | | |
| ೯೪ | **ಕ** | ವಶ್ಯಪೂರ್ವಂಗಳಂ | **ಗ** | ನತ್ಯಪೂರ್ವಂಗಳಂ |

ಹೀಗಿದ್ದರೂ ನಾವು ಸಶಾಸ್ತ್ರವಾದ ಸಂಸ್ಕರಣದ ದೃಷ್ಟಿಯಿಂದ ಒಂದೇ ಪ್ರತಿಯನ್ನು ಸಂಪೂರ್ಣವಾಗಿ ಮೂಲಪಾಠಕ್ಕೆ ಸ್ವೀಕರಿಸಿದ್ದೇವೆ. ಮತ್ತು ಬರೆಹಗಾರರ ಅಥವಾ ಗ್ರಂಥಕರ್ತರ ನಿಚ್ಚಳವಾದ ತಪ್ಪುಗಳನ್ನು ತಿದ್ದುವು ದಕ್ಕೂ ನಾವು ಹಿಂಜರಿದಿದ್ದೇವೆ. ಬರೆಹದ ತಪ್ಪುಗಳು ಆಯಾಯ ಪ್ರತಿಯ ಕಾಲನಿರ್ಧಾರಕ್ಕೆ ಸಾಧಕವಾಗುತ್ತವೆ. ಗ್ರಂಥಕರ್ತನ ಪ್ರಮಾದಗಳು ಅವನ ಯೋಗ್ಯತೆಯನ್ನು ತೋರಿಸಿಕೊಡುತ್ತವೆ. ಗ್ರಂಥಸಂಸ್ಕರಣದಲ್ಲಿ ಭಾಷೆಯ

ಬೆಳೆವಣಿಗೆ, ಕಾಲಮಾನಕ್ಕೆ ತಕ್ಕ ಬರೆಹದ ರೀತಿ, ಉಚ್ಚಾರಣೆಯ ವೈವಿಧ್ಯ ಇತ್ಯಾದಿ ಶಬ್ದಶಾಸ್ತ್ರದ ಅಧ್ಯಯನಕ್ಕೆ ಬೇಕಾಗುವ ಅಂಗಗಳನ್ನು ವ್ಯತ್ಯಾಸ ಮಾಡದೆ ಇದ್ದಕ್ಕಿದ್ದಹಾಗೆ ಕೊಡುವದರಿಂದ ಅನೇಕ ಪ್ರಯೋಜನಗಳಿರುವದರಿಂದ ನಾವು ಶಾಸನಗಳನ್ನು ಪರಿಷ್ಕರಿಸುವುದರಲ್ಲಿ ಉಪಯೋಗಿಸುವ ತತ್ವಗಳನ್ನು ಇಲ್ಲಿಯೂ ಅವಲಂಬಿಸಿದ್ದೇವೆ. ಇನ್ನು ಕವಿಯ ಮೂಲ ಪಾಠವನ್ನು ಗೊತ್ತುಹಚ್ಚುವ ಬಗೆ ಹೇಗೆ ಎಂಬ ಪ್ರಶ್ನೆಯು ಹುಟ್ಟುತ್ತದೆ. ಸಂಪಾದಕರ ಬುದ್ಧಿಮತ್ತೆಗೆ ಈ ವಿಷಯವನ್ನು ಬಿಟ್ಟರೆ ತಮಗೆ ಸಮ್ಮತವಾದ ಪಾಠವನ್ನೇ ಅವರು ಕೊಡುವರಲ್ಲದೆ ಕವಿಗೆ ಸಮ್ಮತವಾದುದನ್ನು ಕೊಡುವರೆಂದು ನಿಶ್ಚಯವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಓದುಗರು ಉಪಲಬ್ಧವಿದ್ದ ಪಾಠಗಳನ್ನೂ ಬರೆಹದ ರೀತಿಯನ್ನೂ ಅನುಲಕ್ಷಿಸಿ ಮೂಲಕಾರನ ಪಾಠಗಳನ್ನು ಊಹಿಸಬಹುದು. ಸಂಸ್ಕರಣದಲ್ಲಿಯೂ ಅವಶ್ಯಕಂಡಲ್ಲಿ ಇಂಥ ಊಹೆಗಳನ್ನು ನಿರ್ದೇಶಿಸಬಹುದು.

ಹಳಗನ್ನಡದ ಇಲ್ಲವೆ ಆಯಾಯ ಕಾಲದ ಕನ್ನಡದ ವೈಶಿಷ್ಟ್ಯಗಳು ಈಗಾಗಲೆ ನಿರ್ಧರಿಸಲ್ಪಟ್ಟಾಗ ಅವುಗಳಿಗನುಗುಣವಾಗಿ ಬರೆಹಗಳಲ್ಲಿ ತಿದ್ದುಪಾಟಗಳನ್ನು ಮಾಡಿಯೇ ಬರೆಯಬಹುದೆಂದು ಕೆಲವರು ಅಪೇಕ್ಷಿಸುವುದುಂಟು. ಮತ್ತು ಹೀಗೆ ತಿದ್ದಿ ಬರೆಯುವದರಿಂದ ಓದುವ ವಿದ್ಯಾರ್ಥಿಗಳಿಗೆ ಪಾಠದ ಸೌಕರ್ಯವಾಗುವುದೆಂದು ಅವರ ಅಭಿಪ್ರಾಯ. ನಿಜ. ಆದರೆ ಸಶಾಸ್ತ್ರ ಸಂಸ್ಕರಣದಲ್ಲಿ ಊಹೆಗಾಗಲಿ ಕೈಗಂಟಿಗಾಗಲಿ ಆಸ್ಪದವಿರತಕ್ಕದ್ದಲ್ಲ, ಅವೆಲ್ಲ ಪರಿಷ್ಕರ್ತರ ಬುದ್ಧಿಮತ್ತೆಯ ವ್ಯಾಪಾರಗಳೆಂದು ಸ್ಪಷ್ಟವಾಗಿ ಪಂಡಿತರಿಗೂ ವಿದ್ಯಾರ್ಥಿಗಳಿಗೂ ತಿಳಿಯುವಂತೆ, ಟಿಪ್ಪಣಿಗಳನ್ನು ಸೇರಿಸಬೇಕು. ಇನ್ನು ಅಜ್ಞರಾದ ಬರೆಹಗಾರರ ಕೈಯಲ್ಲಿ ಸಿಕ್ಕು ಎಷ್ಟೋ ಶ್ರೇಷ್ಠತರಗತಿಯ ಗ್ರಂಥಗಳು ಅಶುದ್ಧವಾದ ಭಾಷೆಯಲ್ಲಿಯೂ ಗ್ರಾಮ್ಯವಾದ ಬರೆಹದಲ್ಲಿಯೂ ಬರೆಯಲ್ಪಟ್ಟವು ನಮ್ಮ ದೃಷ್ಟಿಗೆ ಬೀಳುತ್ತವೆ. ಅಂಥವುಗಳನ್ನು ಜಾಗರೂಕತೆಯಿಂದ ವ್ಯಾಕರಣ ಶುದ್ಧತೆಯ ಮಟ್ಟಕ್ಕೆ ತಂದು ಓದುಗರ ಸೌಕರ್ಯಕ್ಕಾಗಿ ಬೇರೆ ಪರಿಷ್ಕರಣಗಳನ್ನಾಗಿ ಪ್ರಸಿದ್ಧಿಸಬಹುದು. ಱ ೞ ಕುಳಗಳೂ ಬಹುಕಾಲದವರೆಗೆ ಅಂದರೆ ಸಾಮಾನ್ಯವಾಗಿ ೧೭–೧೮ನೆಯ ಶತಮಾನದ ತಾಳಗರಿಯ ಪ್ರತಿಗಳಲ್ಲಿಯೂ ತಪ್ಪುತಡೆಯಾಗಿ ಉಪಯೋಗಿಸಲ್ಪಟ್ಟುದು ಕಂಡು

ಬರುವುದರಿಂದ ಇಲ್ಲಿ ಅವುಗಳನ್ನು ತಿದ್ದಿ ಸೇರಿಸಲು ಪ್ರಯತ್ನಪಟ್ಟಿಲ್ಲ. ವೀರಶೈವ ವಾಙ್ಮಯಕಾಲದಿಂದಿತ್ತ ಶಿಥಿಲ ಪ್ರಯೋಗದಲ್ಲಿದ್ದ ಆ ಅಕ್ಷರಗಳು ಇತ್ತೀಚೆಯ ಬರೆಹಗಳಲ್ಲಿ ವಿಕೃತವಾಗಿ ಉಪಯೋಗಿಸಲ್ಪಟ್ಟಿರುವವೆಂದು ತೋರಿಸಲು ಇಂಥ ಸಶಾಸ್ತ್ರವಾದ ಯಥಾರ್ಥ ಪರಿಷ್ಕರಣಗಳು ಸಹಕಾರಿಗಳಾಗುವವೆಂದು ನಮ್ಮ ಅಭಿಪ್ರಾಯ. ಈ ವಿಷಯವನ್ನು ವಿಸ್ತಾರವಾಗಿ ಪ್ರತಿಪಾದಿಸುವುದು ಇಲ್ಲಿ ಅಪ್ರಸಕ್ತವಾದುದರಿಂದ ಸಂಸ್ಕರಣದ ಬಗೆಗೆ ಇದ್ದ ನಮ್ಮ ವಿಚಾರಗಳನ್ನು ಕೇವಲ ದಿಗ್ದರ್ಶನ ಮಾಡಿದ್ದೇವೆ.

ಗ್ರಂಥದ ಪಾಠಾಂತರಗಳು ಎಲ್ಲವೂ ಗ್ರಂಥಕರ್ತನಿಗೆ ಸಮ್ಮತವಾಗಿರಲು ಸಾಧ್ಯವಿಲ್ಲ. ವಿಶಿಷ್ಟ ಪಾಠ ಮಾತ್ರ ಅವನ ಮೂಲ ಕೃತಿಯಲ್ಲಿ ಸೇರಿರಬೇಕೆಂದು ಸ್ಪಷ್ಟವಾಗಿ ಹೇಳಬಹುದು. ಆ ಮೂಲ ಪಾಠವನ್ನು ಗೊತ್ತು ಹಚ್ಚುವುದು ಪಾಠಾಂತರಗಳ ವಿಮರ್ಶೆಯಿಂದಲೇ ಸಾಧ್ಯವಾಗುವುದು. ಪಾಠಾಂತರಗಳಲ್ಲಿ ಬರೆಹಗಾರರ ಪ್ರಮಾದದಿಂದಾಗಲಿ ಉಪಾಧ್ಯಾಯರ ಅಥವಾ ಓದುಗರ ತಾತ್ಪರ್ಯಾಜ್ಞಾನದ ಮೂಲಕವಾಗಿ ಆಗಲಿ ದೋಷಗಳು (ಅಶುದ್ಧಿಗಳು) ಸೇರುವುದರಿಂದ ಅಂಥವುಗಳನ್ನು ಬಿಸುಟಿ ಸಂಪ್ರತಿಪನ್ನ ಅಂದರೆ ಶುದ್ಧವಾದ ಪಾಠಾಂತರಗಳನ್ನು ವಿಮರ್ಶೆಗೆ ಸ್ವೀಕರಿಸಬಹುದು. ಆದರೆ ಅವುಗಳಲ್ಲಿ ಒಂದೇ ಒಂದು ಪಾಠವು ಮೂಲಪಾಠವಾಗಬಹುದು. ಉಳಿದುವು ಹಿಂದಿನಿಂದ ಊಹೆಯಿಂದಾಗಲಿ ಬುದ್ಧಿಮತ್ತೆಯ ಪ್ರಭಾವದಿಂದಾಗಲಿ ಕೈಚಾಚಿರಬೇಕು. ಪ್ರಕೃತ ಗ್ರಂಥದ ಕೆಲವು ಪದ್ಯಗಳು ಮುಂದಿನ ಕವಿಗಳ ಕೃತಿಗಳಲ್ಲಿ ವಿಶೇಷವಾಗಿ ನಾಗವರ್ಮನ ಕಾವ್ಯಾವಲೋಕನ, ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವ ಮೊದಲಾದ ಗ್ರಂಥಗಳಲ್ಲಿ ಉದಾಹರಿಸಲ್ಪಟ್ಟಿವೆ. ಅವುಗಳಲ್ಲಿರುವ ಪಾಠಭೇದಗಳನ್ನು ಅಲ್ಲಲ್ಲಿ ಅಡಿಯಲ್ಲಿ ಸೇರಿಸಿದ್ದೇವೆ. ಕವಿಚರಿತೆಯ ೧ನೆಯ ಸಂಪುಟದಲ್ಲಿ ಚಂದ್ರರಾಜನ ಮದನತಿಲಕವನ್ನು ವಿವರಿಸುವಾಗ ಆರ್. ನರಸಿಂಹಾಚಾರ್ಯರು ಅಲ್ಲಿಯ ಕೆಲವು ಪದ್ಯಗಳನ್ನು ಉದ್ಧರಿಸಿದ್ದಾರೆ. ಇದರಿಂದಲೂ ಅವರ ಅವಲೋಕನಗೆ ಬಂದ ಪಾಠಭೇದಗಳು ಗೊತ್ತಾಗುವವು. ಹೀಗೆ ಗ್ರಂಥದ ಎರಡು ಹಸ್ತಲಿಖಿತ ಪ್ರತಿಗಳೂ ಇತರ ಗ್ರಂಥಗಳಲ್ಲಿ ಬರುವ ಪದ್ಯಪಾಠಗಳ ಉಲ್ಲೇಖನವೂ ಮದನತಿಲಕದ ಮೂಲಪ್ರತಿಯನ್ನು ತಿಳಿದುಕೊಳ್ಳಲಿಕ್ಕೆ ವಿಮರ್ಶಿಸಬೇಕಾದ ಉಪಲಬ್ಧವಿದ್ದ ಸಾಧನಸಾಮಗ್ರಿಗಳಾಗುವವು.

## ಮದನತಿಲಕ ಗ್ರಂಥ

ಈ ಗ್ರಂಥವು ಕಾಮಶಾಸ್ತ್ರದ ಹಳಗನ್ನಡ ಗ್ರಂಥಗಳಲ್ಲಿ ಪ್ರಾಚೀನ ತಮವಾದುದು. ವಾತ್ಸ್ಯಾಯನನು ತನ್ನ ಕಾಮಸೂತ್ರದಲ್ಲಿ ತನ್ನ ಹಿಂದಿನ ಗ್ರಂಥಕರ್ತರನ್ನು ಹೀಗೆ ವಿವರಿಸಿದ್ದಾನೆ. ಚತುರ್ಮುಖ ಬ್ರಹ್ಮನು ಧರ್ಮ, ಅರ್ಥ, ಕಾಮಶಾಸ್ತ್ರ ಗ್ರಂಥಗಳನ್ನು ಒಂದು ಲಕ್ಷ ಅಧ್ಯಾಯಗಳಲ್ಲಿ ರಚಿಸಿ ದನು. ಅವನ ಮಗ ಸ್ವಾಯಂಭುಮನು ಆ ಗ್ರಂಥದಿಂದಲೇ ಮಾನವ ಧರ್ಮ ಶಾಸ್ತ್ರವನ್ನು ರಚಿಸಿದನು. ಬ್ರಹಸ್ಪತಿಯು ಅರ್ಥಶಾಸ್ತ್ರವನ್ನು ಬರೆದನು. ಮಹಾದೇವರ ಗಣ ನಂದಿಕೇಶ್ವರನು ೧೦೦೦ ಅಧ್ಯಾಯಗಳಿಂದ ಕಾಮ ಶಾಸ್ತ್ರವನ್ನು ಬರೆದನು. ಆಮೇಲೆ ಉದ್ದಾಲಕ ಮುನಿಯ ಮಗನು (ಹೆಸರು ಕೊಟ್ಟಿಲ್ಲ) ೫೦೦ ಅಧ್ಯಾಯಗಳಲ್ಲಿ ಅದನ್ನೇ ಸಂಗ್ರಹಿಸಿದನು. ಅದನ್ನು ಬಭ್ರುವಿನ ಮಗ ಪಾಂಚಾಳನು ೧೫೦ ಅಧ್ಯಾಯಗಳಿಂದ ಹೇಳಿದನು. ಪಾಂಚಾಳನಿಂದ ಇತ್ತ ಅನೇಕ ಆಚಾರ್ಯರು ಕಾಮಶಾಸ್ತ್ರದ ವಿವಿಧ ವಿಷಯ ಗಳನ್ನು ಪ್ರತ್ಯೇಕವಾಗಿ ವಿವರಿಸಿದರು. (೧) ಪಾಟಳಿಪುತ್ರ ದತ್ತಕನು 'ವೈಶಿಕ' ವನ್ನು, (೨) ಚಾರಾಯಣನು 'ಸಾಧಾರಣ'ವನ್ನು, (೩) ಸ್ವರ್ಣನಾಭನು 'ಸಾಂಪ್ರಯೋಗಿಕ'ವನ್ನು (೪) ಘೋಟಮುಖನು 'ಕನ್ಯಾ ಸಂಪ್ರಯುಕ್ತ' ವನ್ನು, (೫) ಗೋನರ್ದೀಯನು 'ಭಾರ್ಯಾಧಿಕರಣ'ವನ್ನು, (೬) ಪತಂ ಜಲಿಯು 'ಪಾರದಾರಿಕ'ವನ್ನು, (೭) ಗೋಣಿಕಾಪುತ್ರ ಕೂಚಿಮಾರನು 'ಔಪನಿಷದಕ'ವನ್ನು ಕುರಿತು ಬರೆದರು. ಕಡೆಗೆ ವಾತ್ಸ್ಯಾಯನನು ೩೬ ಅಧ್ಯಾಯಗಳಲ್ಲಿ ಈ ಏಳು ಅಧಿಕರಣಗಳ ವಿಷಯಗಳನ್ನು ಸಂಗ್ರಹವಾಗಿ ವಿವರಿಸಿದನು. ಈ ಗ್ರಂಥದ ಮಿತಿಯು 'ನಾಲ್ವತ್ತೆಂಟಕ್ಕರದ ಸಮಪಾದ ಸಹಸ್ರಗ್ರಂಥ'ವಾಗಿತ್ತು. ಆಮೇಲೆ ಚಂದ್ರರಾಜನು 'ಆಗಮಲೌಕಿಕವಿರೋ ಧಮಂ ಕಳೆದು ಸಾರಾಂಶಮಂ ಕೊಂಡು ಪಲವು ಮತಂಗಳನೊಂದುಮಾಡಿ, ಪದಿನೆಂಟಧಿಕರಣಂಗಳಿಂದಲಂಕಾರಾಲಂಕೃತಮಾಗೆ **ನಾನಾ ಛಂದದಿ ನೈನೂರು ಗದ್ಯಪದ್ಯಂಗಳಿಂ** ವಿಶ್ರುತಂ ಮಾಡಿ ಪೇಳ್ದಂ" (ಪುಟ ೧೫).

ಇದರಿಂದ ಚಂದ್ರರಾಜನ ಮದನತಿಲಕದ ಮೂಲ ಪ್ರತಿಯಲ್ಲಿ ೫೦೦ ಗದ್ಯ ಪದ್ಯಗಳೂ ೧೮ ಅಧಿಕರಣಗಳೂ ಇರಬೇಕೆಂಬುದು ಗೊತ್ತಾಗುವುದು. ಆ ಗದ್ಯ ಪದ್ಯಗಳು ನಾನಾ ಛಂದಸ್ಸಿನಲ್ಲಿ ಇರುವವೆಂದೂ ತಿಳಿಯಬರುತ್ತದೆ.

ಪ್ರಕೃತ ಉಪಲಬ್ಧವಿದ್ದ ಹಸ್ತಪ್ರತಿಗಳ ಆಧಾರದಿಂದ ತಯಾರಿಸಲ್ಪಟ್ಟ ಮದನತಿಲಕದಲ್ಲಿ ೧೧ ಅಧಿಕಾರಗಳೂ ಒಟ್ಟು ೩೯೭ ಗದ್ಯಪದ್ಯಗಳೂ (ಪದ್ಯ ೩೭೬ ಗದ್ಯ ೨೧) ಇರುವವು. ಪದ್ಯಗಳು ನಾನಾ ಛಂದಸ್ಸಿನಲ್ಲಿಯೂ ಬಂಧದಲ್ಲಿಯೂ ಇರುತ್ತವೆ. ಸುಮಾರು ಈಗಿನ ಅರ್ಧದಷ್ಟು ಗಾತ್ರದ ಗ್ರಂಥವು ಉಪಲಬ್ಧವಿಲ್ಲವೆಂದು ಹೇಳಬಹುದು. ಈ ತ್ರುಟಿತ ಭಾಗವು ಸಿಕ್ಕರೆ ಅದನ್ನು ಯಥಾವಕಾಶ ಪ್ರಕಾಶಗೊಳಿಸಬಹುದೆಂದು ಬಗೆದು ಈಗ ಸಿಕ್ಕಷ್ಟು ಭಾಗವನ್ನು ಮಾತ್ರ ಪ್ರಸಿದ್ಧಿಸಿದ್ದೇವೆ.

ಪ್ರಕಾಶಿತವಾದ ಭಾಗದಲ್ಲಿ ಕೆಳಗಿನ ವಿಷಯಗಳು ನಿರೂಪಿಸಲ್ಪಟ್ಟಿವೆ.

## ಪ್ರಥಮಾಧಿಕಾರ

ಇದರಲ್ಲಿ ಒಟ್ಟು ೮೬ ಪದ್ಯಗಳಿರುವವು. ವಾಡಿಕೆಯಂತೆ ಅಧಿಕೃತ ದೇವತೆಯಾದ ಕಾಮನನ್ನು 'ಭಾವೋದ್ಭವನೀಗೆ ಸಮಗೆ ಸುಖ ಸಂಪದಮಂ ॥' ಎಂದು ೧ನೆಯ ಪದ್ಯದಲ್ಲಿ ಪ್ರಾರ್ಥಿಸಿ ಮುಂದಿನ ಪದ್ಯಗಳಲ್ಲಿ (೨–೨೯) ಕವಿಯು ತನ್ನ ಪೋಷಕನಾದ ರೇಚ ನೃಪನನ್ನು ವರ್ಣಿಸಿದ್ದಾನೆ. ರೇಚ ನೃಪನು ಚಾಳುಕ್ಯ ಚಕ್ರವರ್ತಿ ಕೀರ್ತಿವಿದ್ಯಾಧರ ಜಯಸಿಂಹ ದೇವನ ಪೋಷಣೆಯಲ್ಲಿ ಬೆಳೆದು ( ತೊಡೆಯೆ ತೊಟ್ಟಿಲಾಗಿರೆ ಬಳೆದುಂ ) (೧–೬) ಅವನ ಕೃಪಾಕಟಾಕ್ಷದಿಂದ 'ಸಮಧಿಗತ ಪಂಚಮಹಾಶಬ್ದ' ಎಂಬ ಸಾಮಂತಪದ ಸೂಚಕವಾದ ಬಿರುದನ್ನು ಪಡೆದನು. ಸಿಂಹಾಸನವ ದುಃಸ್ಥಿತಿಯನ್ನು ಕಳೆದು 'ನಿಖಿಳ ಧರಾದೇವಿಯಂ . . . . . . ಜಯಸಿಂಹಾವನೀಶಂಗೆ ನಿಷ್ಕಂಟಕಂ' ಮಾಡಿದ್ದಕ್ಕಾಗಿ ಉಪಕೃತನಾದ ಜಯಸಿಂಹನು ಅವನಿಗೆ ಆತ್ಮಪ್ರತಿಪತ್ತಿಯನ್ನು (ತನ್ನ ಗೌರವವನ್ನು) ಕೊಟ್ಟನು. ರೇಚನು ಬಹು ಶೂರನೂ ಭೃಗುವಿದ್ಯೆ, ಅಶ್ವವಿದ್ಯೆ, ಗಜವಿದ್ಯೆಗಳಲ್ಲಿ ಅತ್ಯಂತ ನಿಪುಣನೂ (೧, ೨೦-೨೨) ಆಗಿದ್ದನು. ಇವನ ಹೆಂಡತಿ ವಿನಯದಿಂದ 'ಸ್ತ್ರೀಯರ ನೊಲಿಸುವ ಭೇದಂಗಳಂ ಸೋಪದೇಶಮೆಂಬಂತಿರೆ ಬೆಸಸಿಂ', 'ರೇಚ ಮಹೀಶನೀ ಜಗಕೆಲ್ಲಂ ಸ್ಮರತತ್ವಮಂ ಬೆಸಸ' ಎಂದು ವಿಜ್ಞಾಪನೆ ಮಾಡಿ ಕೊಳ್ಳಲು ರೇಚಮಹೀಶನು "ಸಂಪೂರ್ಣೇಂದುಮುಖಿಗರುಪಿದಂ ನಯದಿಂದಂ ಮುನಿಮುತಮನವನಿಗೆಲ್ಲಂ ಹಿತಮಂ" (೧, ೧, ೩೬) ಹಿಂದಕ್ಕೆ ಮಹಾದೇವನು ತನ್ನ ಹೆಂಡತಿ ಪಾರ್ವತೀದೇವಿಗೆ ಉಪದೇಶಿಸಿದ ಕಾಮ

ತತ್ತ್ವವನ್ನೇ ರೇಚನು ತನ್ನ ಹೆಂಡತಿಗೆ ಹೇಳಿದನು. ಅದನ್ನೇ ಚಂದ್ರನು 'ಮದನ ತಿಲಕ'ದಲ್ಲಿ ವಿವರಿಸಿದನು (" ಇಂಪಾವಗಮೊದವೆ ಪಲವು ಛಂದದೊಳೊಗೆದಂ . . . . . . "). ರೇಚನನ್ನು ಕವಿಯು ರೇಚ, ರೇಚಮಹೀಶ, ರೇಚನೃಪತಿ, ರೇಚಿ ಮಂತ್ರೋದ್ಭವ, ರೇಚಿಗ ಇವೇ ಮೊದಲಾದ ಹೆಸರುಗಳಿಂದ ಸಂಬೋಧಿಸಿದ್ದಾನೆ. ಒಂದೆಡೆಯಲ್ಲಿ (ಪದ್ಯ ೪೫) ಚಂದ್ರಕವಿಯು ತನ್ನನ್ನು 'ಧರಾಧೀಶಜಾಪತಿಪಾದಾಂಬುರುಹಾದಿ ಪೂರ್ತ ಸುಮನೋಜಾತಂ' ಎಂದು ವರ್ಣಿಸಿದ್ದಾನೆ. ಇಲ್ಲಿ 'ಧರಾಧೀಶಜಾ ಪತಿ' ಎಂಬ ವಿಶೇಷಣದಿಂದ ರೇಚನೃಪತಿಯು ಸೂಚಿಸಲ್ಪಟ್ಟಿದ್ದಾನೆ. ಇದರಿಂದ ರೇಚನು ಧರಾಧೀಶ ಜಯಸಿಂಹದೇವನ ಮಗಳನ್ನು ಮದುವೆಯಾಗಿದ್ದನೆಂದು ತಿಳಿಯಬಹುದು. ಜಯಸಿಂಹರಾಜನು ತನ್ನ ಅಳಿಯನಿಗೆ ಸಾಮಂತಪದವನ್ನು ಕೊಟ್ಟು ಸತ್ಕರಿಸಿದ್ದು ಸಹಜವೇ ಇದೆ.

ಚಂದ್ರಕವಿಯು ಅರವತ್ತುನಾಲ್ಕು ಕಲೆಗಳಲ್ಲಿ ನಿಪುಣನು. ವಿಪ್ರಕುಲ ಲಲಾಮನು. ವ್ಯಾಕರಣ, ಅರ್ಥಶಾಸ್ತ್ರ, ಗಣಿತ, ಅಲಂಕಾರ, ಕಾವ್ಯ. ನಾಟಕ ವಾತ್ಸ್ಯಾಯನ, ನೃತ್ತ, ಗೀತ ಮೊದಲಾದ ವಿದ್ಯೆಗಳಲ್ಲಿ ಪರಿಣತನಾಗಿದ್ದನು. 'ಕವಿತಾಮಹಾರ್ಣವಂ', 'ಮಹಾಕವಿ'ಯೆಂಬ ಪ್ರಶಸ್ತಿಗಳಿಂದ ಪ್ರಸಿದ್ಧನಾಗಿದ್ದನು. ಇವನು 'ಮುನ್ನ ಪೇಳ್ದುದನನುಭವಜೆಗವಾಗಮುಕ್ಕಮುಳವಡೆ', 'ಮನೋಜಾಗಮೋಕ್ತಮುಂ ಲೌಕಿಕಮುಂ ಸಂಧಿಸಿ ನೀತಿಗೊಡಂಬಡುವಂದದಿ',—'ಬುಧಮಂಡಳಿ ನಚ್ಚಿ ಮೆಚ್ಚೆ' ಪೇಳಿದನು. (೩೯–೫೭)

ತನ್ನ ಹಿಂದೆ ಕಾಮಶಾಸ್ತ್ರವನ್ನು ಅಧಿಕರಿಸಿ ಬರೆದ ಗ್ರಂಥಕರ್ತರ ಹೆಸರನ್ನೂ ಅವರು ಪ್ರತಿಪಾದಿಸಿದ ವಿಷಯಗಳನ್ನೂ ಸಂಕ್ಷೇಪವಾಗಿ ಒಂದು ಗದ್ಯದಲ್ಲಿ ವಿವರಿಸಿದ್ದಾನೆ. ಪರಿಮಿತಿಯುಳ್ಳ ಮಾನುಷಾಯುಷ್ಯದಲ್ಲಿ ದೋಷರಹಿತವಾದ ಧರ್ಮಾರ್ಥಕಾಮಗಳನ್ನು ದೇಶಕಾಲಬಲೋಪಾಯದಿಂದ ಸೇವಿಸಬೇಕು. ಧರ್ಮ ಮತ್ತು ಅರ್ಥ ಇವೆರಡೂ ಕಾಮಕ್ಕೆ ಹೇತುವಾದ್ದರಿಂದ ಕಾಮವೇ ಮುಖ್ಯವಾದದ್ದು. ಕಾಮದಿಂದ ಪ್ರಜಾಭಿವೃದ್ಧಿಯಾಗುವದು; 'ಅಪುತ್ರಸ್ಯ ಗತಿರ್ನಾಸ್ತಿ' ಎಂದು ಧರ್ಮಶಾಸ್ತ್ರವಚನವಿರುವುದರಿಂದ ಕಾಮಸೇವನೆಯಿಂದ ಪುತ್ರನನ್ನು ಪಡೆದು ಸದ್ಗತಿಯನ್ನು ಹೊಂದಬೇಕು. ಪ್ರಪಂಚದ ೨೫ ತತ್ತ್ವಗಳಲ್ಲಿ ವ್ಯಾಪ್ತವಾದ ಕಾಮವು ಮೋಕ್ಷ

ಸುಖಕ್ಕೆ ಕಾರಣವಾಗುವದು. ಪ್ರೇಮದಿಂದ ಕಾಮಸುಖವು ಫಲಿಸುವದು. ಆದ್ದರಿಂದ ಸ್ತ್ರೀಯರಲ್ಲಿ ರಾಗವು ಉದಯ ಹೊಂದುವಂತೆ ಪುರುಷರು ಪ್ರಯತ್ನಿಸಬೇಕು. ಪರಸ್ಪರ ರಾಗಪರ್ಯಾಯದಿಂದ ಸ್ತ್ರೀ ಪುರುಷ- ಷಂಢ-ಅಂಗಹೀನ ಸಂತತಿಯು ಹುಟ್ಟುತ್ತದೆ. ಆದ್ದರಿಂದ " ಆ ನಾರಿಯ ನೊಲ್ದೊಲಿಸುಗೆ। ಮಾನಯಶೋಧರ್ಮ ವಂಶಮಂ ಬಯಸುವನಂ ॥ ೬೧ ॥

## ದ್ವಿತೀಯಾಧಿಕಾರ

ಈ ಅಧಿಕಾರದಲ್ಲಿ ಪದ್ಮಿನಿ, ಶಂಕಿನಿ, ಹಸ್ತಿನಿ, ಚಿತ್ತಿನಿ, ಕಾಮಿನಿಯರ ಬಾಹ್ಯ ಲಕ್ಷಣಗಳನ್ನು ಹೇಳಿ ಈ ನಾಲ್ಕು ಜಾತಿಯ ಸ್ತ್ರೀಯರ ಅವಯವ ಗುಣಗಳು ಒಂದರೊಳಗೊಂದು ಕೂಡಲು ಸಂಕೀರ್ಣ ಜಾತಿಯುಂಟಾಗುವದೆಂದು ನಿರೂಪಿಸಿದೆ.

## ತೃತೀಯಾಧಿಕಾರ

ಸ್ತ್ರೀಯರಲ್ಲಿ ಹಿಂದಿನ ಅಧಿಕಾರದಲ್ಲಿ ಹೇಳಿದಂತೆ ನಾಲ್ಕು ಜಾತಿಗಳಲ್ಲದೆ ದಿವಿಜಾಂಶಕೆ, ಯಕ್ಷಾಂಶಕೆ, ರಾಕ್ಷಸಾಂಶಕೆ, ಪಿಶಾಚಾಂಶಕೆ, ಮತ್ತು ಸಂಕೀರ್ಣಾಂಶಕೆ ಎಂದು ಬೇರೆ ಐದು ವಿಭಾಗಗಳು ನಿರೂಪಿಸಲ್ಪಟ್ಟಿವೆ. ದಿವಜಾಂಶಕೆಯು ಸತ್ಯ ಶೌಚಾಚಾರಸಂಪನ್ನೆ, ಪತಿಭಕ್ತಿಯುತೆಯೂ ಯಕ್ಷಾಂಶಕೆಯು ಶೃಂಗಾರಪ್ರಿಯೆ, ಲುಬ್ಧೆ, ಸೊಬಗಿನವಳೂ ರಾಕ್ಷಸಾಂಶಕೆಯು ಕೋಪ ಸುಳ್ಳು ಹೇಳುವದು, ವಿಡಂಬನ, ಮೋಸಗಾರಿಕೆ ಉಗ್ರ ಸ್ವಭಾವ ಇತ್ಯಾದಿ ಸ್ವಭಾವವುಳ್ಳವಳೂ ಪಿಶಾಚಾಂಶಕೆಯು ಚಾಡಿಖೋರಿ, ವ್ಯಭಿಚಾರಿಣಿ, ಮದ್ಯಪಾನಿ ಇತ್ಯಾದಿ ದೋಷವುಳ್ಳವಳೂ ಇವೆಲ್ಲ ಗುಣ ದೋಷಗಳುಳ್ಳ ಹೆಣ್ಣು ಸಂಕೀರ್ಣಾಂಶಕೆಯೂ ಎಂದು ಅವರ ಗುಣದೋಷಗಳು ಸಂಕ್ಷೇಪವಾಗಿ ಹೇಳಲ್ಪಟ್ಟಿವೆ.

## ಚತುರ್ಥಾಧಿಕಾರ

ಈ ಮೇಲಿನ ಸ್ತ್ರೀ ಜಾತಿಗಳಲ್ಲದೆ, ದೇಶ ವಿಭಾಗದಿಂದ, ಕಂನಡಿತಿ, ಮ್ಲೇಂಛ ವಿಷಯದಾಕೆ ಎಂದು ಆ ಆ ದೇಶ ಭಾಗದ ಗುಣಗಳ ಪ್ರಭಾವ

ವನ್ನು ತೋರಿಸುವ ಸ್ತ್ರೀ ಸ್ವಭಾವವನ್ನು ನಿರ್ದೇಶಿಸಿದೆ. ಕಂನಡಿತಿ ರೂಪ ಲಾವಣ್ಯಯುಕ್ತೆಯೂ ವಿಲಾಸಪ್ರಿಯೆಯೂ ಸುರತ ಪ್ರವೀಣೆಯೂ ಆಗಿರುವಳು. ಮ್ಲೇಂಛ ವಿಷಯದಾತೆಯು ಸುರತಪ್ರಿಯೆ, ಮಾಂಸಾಸನೆ, ಸರೋಷೆಯಾಗಿರುವಳು. ಕಡೆಯ ಎರಡು ಪದ್ಯಗಳಲ್ಲಿ ಉತ್ತರ ದೇಶದ ಸ್ತ್ರೀಯರ ಸ್ವಭಾವವನ್ನು ಹೇಳಿದಂತೆ ತೋರುತ್ತದೆ. ಪದ್ಯಗಳು ತ್ರುಟಿತವಾಗಿವೆ.

## ಪಂಚಮಾಧಿಕಾರ

ದೇಹದ ಧಾತುಭೇದದಿಂದ ಸ್ತ್ರೀಯರ ಪ್ರಕೃತಿಯಲ್ಲಿ ವ್ಯತ್ಯಾಸವು ಕಂಡು ಬರುತ್ತದೆ. ವಾತ, ಪಿತ್ತ, ಖಫಗಳಲ್ಲಿ ಖಫಾಂಶವು ಅಧಿಕವಾಗಿದ್ದ ಸ್ತ್ರೀಯು ಕಪ್ಪು ಉಗುರು, ಕಣ್ಣುಗಳುಳ್ಳವಳೂ ಶೀತ ಅವಯವಗಳುಳ್ಳವಳೂ ಆಗಿರುವಳು. ಅವಳನ್ನು ನಯದಿಂದ ನಗೆಗೂಡಿ ಪ್ರೀತಿಯನ್ನು ಹುಟ್ಟಿಸಿ ವಶಪಡಿಸಿಕೊಳ್ಳಬೇಕು. ವಾತಾಂಶವು ಅಧಿಕವಾಗಿದ್ದ ಸ್ತ್ರೀಯು ಕರ್ಕಶ ಅವಯವವುಳ್ಳಾಕೆ; ಗುಳ್ಳೆಗಣ್ಣುವುಳ್ಳಾಕೆ, ಸಕೋಪೆ, ಬಹು ಭೋಜನೆ ಮುಂತಾದ ಲಕ್ಷಣಗಳುಳ್ಳವಳು. ಅವಳನ್ನು ನಿಷ್ಠುರ ಭಾಷಣದಿಂದ ವಶಪಡಿಸಬೇಕು. ಪಿತ್ತಾಧಿಕವಾದ ಸ್ತ್ರೀ ಕಣ್ಣು, ಹಲ್ಲು ಮುಂತಾದುವು ಹಸುರಾಗಿದ್ದು ದುರ್ಗಂಧವನ್ನು ಬಿಡುತ್ತ ತಂಪನ್ನೇ ಯಾವಾಗಲೂ ಬಯಸುತ್ತ ಕೋಪಯುಕ್ತಳಾಗಿರುವಳು. ವನಲತೆಗಳಲ್ಲಿಯೂ ಉಸುಬಿನ ಬೈಲುಗಳಲ್ಲಿಯೂ ಸುರತೋತ್ಸವ ಚುಂಬನ ಭೂಷಣಂಗಳನ್ನು ಸಂಧಿಸಿ ಪೈತ್ಯದವಳನ್ನು ಗೆಲ್ಲಬೇಕು. ಹೀಗೆ ಕಾಲ, ದೇಶ, ಪ್ರಕೃತಿಗಳನ್ನು ಅನುಲಕ್ಷಿಸಿ ಸ್ತ್ರೀಯರ ಗುಣ ದೋಷಗಳನ್ನು ತಿಳಿದು ಅವರೊಡನೆ ರತಿಯುಳ್ಳವರಾಗಬೇಕು. ಈ ಮೂರು ಪ್ರಕೃತಿಗಳು ಮಿಶ್ರವಾದರೆ 'ಸಂಕೀರ್ಣೆ'ಯರಾಗುವರು. ಅವರ ಭೇದವನ್ನು ನಯದಿಂದ ತಿಳಿದು ಅವರೊಡನೆ ಬೆರೆಸಿ ವಶಪಡಿಸಿಕೊಂಡವನು ಚತುರನು.

## ಷಷ್ಠಾಧಿಕಾರ

ಈ ಅಧಿಕಾರದಲ್ಲಿ ಉತ್ತಮ, ಮಧ್ಯಮ, ಕನಿಷ್ಠ ನಾಯಕಿಯರೆಂಬ ಮೂರು ತೆರೆದ ನಾರಿಯರ ಲಕ್ಷಣಗಳನ್ನು ಹೇಳಿದೆ. ಶ್ರೇಷ್ಠ ಸ್ತ್ರೀಗೆ ಕಮಲ

ದಂತೆ ಆಹ್ಲಾದಕವಾದ ಮುಖ, ಉನ್ನತ ಗ್ರೀವ, ವಿಸ್ತಾರವಾದ ಶಿಗ, ಸೀರಾದ ಟೊಂಕ, ಕಪ್ಪು ಕೂದಲು, ಕೆಂಪು ತುಟಿ ಇವೇ ಮೊದಲಾದ ಉತ್ತಮ ಲಕ್ಷಣ ಗಳಿರುವವು. ಇವಳು 'ಸುಲಲಿತಾಕಾರಸಪ್ರವಂಗಲ್ಲದೆ' ಅನ್ಯರಿಗೆ ಮನ ಸೋಲುವದಿಲ್ಲ. ಮಾಧ್ಯಮಾಂಗನೆಯಲ್ಲಿ ಉತ್ತಮ ವನಿತೆಯ ಕೆಲವು ಗುಣ ಗಳು ಮಾತ್ರ ಇರುವವು. ಕನಿಷ್ಠೆ 'ಇನಿತು ಗುಣವಿಲ್ಲದವಳ್' ಇವರಲ್ಲಿ ಮಧ್ಯಮೆಯು ಸಿಟ್ಟಿಗೆದ್ದು ಸಮಾಧಾನ ಹೊಂದುವ ಸ್ವಭಾವದವನನ್ನು ಮೆಚ್ಚು ವಳು. ಕನಿಷ್ಠೆಯು ಜಡಿದು ಅಳಲಿಸುವ ನಿಷ್ಠುರ ಸ್ವಭಾವದವನನ್ನು ಪ್ರೀತಿ ಸುವಳು.

## ಸಪ್ತಮಾಧಿಕಾರ

ಹೀಗೆ ಸ್ತ್ರೀಯರಲ್ಲಿ ಪ್ರಕೃತಿ, ದೇಶ, ಗುಣ ಭೇದಗಳಿಂದ ಅನೇಕ ಅವಾಂತರ ಭೇದಗಳನ್ನು ಕುರಿತು ಹೇಳಿದೆವು. ಈಗ ವಯಸ್ಸಿನ ಭೇದದಿಂದ ಬಾಲೆ, ಯೌವನೆ, ಪ್ರೌಢೆ ಮತ್ತು ಲೋಲೈಯೆಂಬ ನಾಲ್ಕು ತೆರದ ಕಾಂತೆಯರ ಲಕ್ಷಣಗಳನ್ನು ಹೇಳುವೆನು. ಬಾಲೆಗೆ ೧೪ ವರ್ಷ, ಯೌವನೆಗೆ ೩೦ ವರ್ಷ, ಪ್ರೌಢೆಗೆ ೫೨ ಮತ್ತು ಲೋಲೈಗೆ ಇಂತಿಷ್ಟೇ ಎಂದು ವಯೋ ನಿರ್ಬಂಧವಿಲ್ಲ. ಈ ಸ್ತ್ರೀಯರನ್ನು ಚದುರವಿಟನು ಹೇಗೆ ಗೆಲ್ಲಬೇಕೆಂಬುದನ್ನು ಈ ಅಧಿಕಾರ ದಲ್ಲಿ ಗುಣ ಲಕ್ಷಣ ವಿವರಗಳಿಗೆ ಅನುಸಾರವಾಗಿ ವಿಸ್ತಾರವಾಗಿ ಹೇಳಿದೆ.

## ಅಷ್ಟಮಾಧಿಕಾರ

ಇದರಲ್ಲಿ ಒಟ್ಟು ೬೬ ಪದ್ಯಗಳಿವೆ. ಸ್ತ್ರೀಯರಲ್ಲಿ ಮೇಲ್ಕಂಡ ರೀತಿ ಯಲ್ಲಿ ವಿಭೇದಗಳಿರುವವಲ್ಲದೆ ಕುಲವಧು, ಕುಲಟಾಂಗನೆ, ವೇಶ್ಯೆಯೆಂದು ಮೂರು ಬೇರೆ ಪ್ರಕಾರಗಳಿರುವವೆಂದು ನಿರೂಪಿಸಿ ಅವರವರ ವಿಶಿಷ್ಟ ಲಕ್ಷಣ ಗಳನ್ನು ವಿಸ್ತಾರವಾಗಿ ಹೇಳಿದೆ. ಕುಲಾಂಗನೆಯು ದೇವತಾಂಶಕೆ; ಧರ್ಮಕ್ಕೆ ಅರ್ಥಕ್ಕೆ ಅತಿಥಿಗೆ ಪಿತೃಕಾರ್ಯ ಮತ್ತೂ ದೇವಕಾರ್ಯಗಳಿಗೆ ಕುಲವನಿತೆ ಅವಶ್ಯವಾದ್ದರಿಂದ ಆಕೆ ಪೂಜ್ಯಳು. ಗುರುಗಳು ತಾಯಿ ತಂದೆ, ಮಹಾ ಮುನಿಗಳು (ಗೋತ್ರಪುರುಷರು) ವಿಪ್ರರು, ಇಷ್ಟ ಬಾಂಧವರು ಮತ್ತು

ವೈವಾಹಿಕ ಅಗ್ನಿ ಇವುಗಳ ಸನ್ನಿಧಿಯಲ್ಲಿ ಸ್ವೀಕರಿಸಿದ ಗಂಡನನ್ನು ಬಿಟ್ಟು ಅನ್ಯಪುರುಷರನ್ನು ಬಯಸುವ ಹೆಣ್ಣು ನರಕಕ್ಕೆ ಸೇರುವಲ್ಲಿ ಸಂದೇಹವಿಲ್ಲ. ದುಷ್ಟ ಸ್ತ್ರೀ ಸರ್ವದಾ ನಿಷ್ಠುರ ಭಾಷಿಣಿಯೂ ಸುಳ್ಳು ಮಾತಾಡುವವಳೂ ಚಾಡಿಖೋರಿಯೂ ದುರ್ವ್ಯಸನೆಯೂ ಅನೇಕ ದುರ್ಗುಣಗಳಿಗೆ ಆಗರವೂ ಆಗಿರುವಳು. ಆದರೆ ಸತಿಯು ದೇವಬಂಧುಜನ ವತ್ಸಲೆಯಾಗಿದ್ದು ಪತಿಯನ್ನು ನಯವಿನಯಗಳಿಂದ ಆದರಿಸುತ್ತ ಎಲ್ಲರ ಆದರಕ್ಕೆ ಪಾತ್ರಳಾಗಿರುವಳು. ಕುಲೀನ ಲಲನೆಯರನ್ನು ಗೊರವರು ( ಶೈವ ಪೂಜಾರಿ ) ಶ್ರವಣ ( ಜೈನ ಭಿಕ್ಷು ) ದೊಂಬ, ಭಿಕ್ಷುಕ, ಗಾಣಿಗ ( ತೆಲ್ಲಿಗ=ತೈಲಕಾರ ) ಜೋಯಿಸ, ಜಾದೂಗಾರ ಮೊದಲಾದ ಜನರ ಸಮೀಪಕ್ಕೆ ಹೋಗಗೊಡಬಾರದು ( ಪದ್ಯ ೨೬—೨೯ ). ಇಂಥ ಸ್ತ್ರೀಯರನ್ನು ದುಷ್ಟ ಸಂಸರ್ಗದಿಂದ ಕಾಯಲಿಕ್ಕೆ ಬುದ್ಧಿವಂತನಾದ ಒಬ್ಬ ವೃದ್ಧ ಪುರುಷನನ್ನು ನೇಮಿಸಬೇಕು. ಅವನಿಗೆ ಇರಬೇಕಾಗಿದ್ದ ಲಕ್ಷಣಗಳನ್ನು ೩ ೪ ಪದ್ಯಗಳಲ್ಲಿ ಕವಿಯು ವಿವರಿಸಿದ್ದಾನೆ. ಕುಲೀನ ಸ್ತ್ರೀಯ ಲಕ್ಷಣಗಳನ್ನೂ ಅವಳನ್ನು ರಕ್ಷಿಸುವ ಬಗೆಯನ್ನೂ ನಿರೂಪಿಸಿದ ಮೇಲೆ ಪಾಣ್ಬೆ (ವ್ಯಭಿಚಾರಿಣಿ) ಪುಂಶ್ಚಲಿ ಮೊದಲಾದ ಅಸತಿಯರನ್ನು ಸರ್ವಥಾ ತ್ಯಜಿಸಬೇಕೆಂದು ನಿಂದಿಸುವನು. ಕುಲೀನ ಸ್ತ್ರೀಯನ್ನು ಹೇಗೆ ಮನವೊಲಿಸಬೇಕೆಂಬುದನ್ನೂ ತಿಳಿಸುವನು. ಒಬ್ಬ ಸತಿಯನ್ನು ಪಡೆದಡೆ ಸುಖವಾಗುವದು. ನೂರು ಜನರನ್ನು ಹೊಂದಿದರೆ ಸುಖವು ಎಂದಿಗೂ ಬರಲಾರದು. (ನೂರ್ವರುಮಂ ಪಡೆದೊಡೆ ಕರಂ ಸುಖಂ ಬಡೆದಪನೆ? ॥ ೫೩ ॥) ರಾಜಕಾರ್ಯ ಸಂವರಣಾರ್ಥವಾಗಿ ರಾಜನು ಅನೇಕ ಜನ ಹೆಂಡಂದಿರನ್ನು ಲಗ್ನಮಾಡಿಕೊಳ್ಳುವನು. ಆದರೆ ರೂಪವತಿಯೂ ಪುಣ್ಯಲಕ್ಷಣೆಯೂ ಆದ ಕುಲಾಂಗಿಯನ್ನು ನಂಬುವುದೆ ಒಳ್ಳೆಯದು. ಒಬ್ಬಳನ್ನು ಮನದಣಿ ಸಂತೋಷಪಡಿಸಲಾರದ ಪುರುಷನು ಅನೇಕ ಅಬಲೆಯರನ್ನು ಹೇಗೆ ತೃಪ್ತಿಪಡಿಸಬಲ್ಲನು. ಬಾಲೆಯರು ಮತ್ತು ಲೌಲ್ಯೆಯರು ಕಾಮವಶರಾಗಿರುವದರಿಂದ ಅವರನ್ನು ಯತ್ನದಿಂದ ಕಾಯಬೇಕು. ಅವರಿಂದ ಅಪಾಯಗಳಾಗುವ ಸಂಭವವುಂಟು. ಆದ್ದರಿಂದ ಪುರುಷನು ಚತುರನಾಗಿರಬೇಕು. ರಾಜನು ತನ್ನ ವನಿತೆಯರನ್ನು ಚೆನ್ನಾಗಿ ಪರಿರಕ್ಷಿಸಿ ಅವರನ್ನು ಸಂತೋಷದಲ್ಲಿ ಇರಿಸಬೇಕು.

## ನವಮಾಧಿಕಾರಂ

ಕುಲಟಾಸಂಗವನ್ನು ಪುರುಷನು ಸರ್ವಥಾ ಮಾಡಬಾರದು. ಅದರಿಂದ ಸುಖವು ಅಳಿಯುವದು, ಕೀರ್ತಿ ನಾಶವಾಗುವದು, ಪದ್ಧತಿಯು ದೂರಾಗುವದು, ನಡತೆ ಕೆಡುವುದು. ಅದರಂತೆ ಪರಸ್ತ್ರೀಯನ್ನೂ, ನಪುಂಸಕೆಯನ್ನೂ, ಗುರು ಪತ್ನಿಯನ್ನೂ, ಋಷಿ ಪತ್ನಿಯನ್ನೂ, ಅಂತ್ಯ ಜಾತಿಯವಳನ್ನೂ, ವ್ರತಬದ್ಧಳಾದವಳನ್ನೂ, ಅಂಗಹೀನೆಯನ್ನೂ, ಭಿಕ್ಷುಕಿಯನ್ನೂ ಕುಲಕಂಟಕಳನ್ನೂ, ಮುಂಗಡಿಕೊಸುವುಳ್ಳವಳನ್ನೂ ಮನಸ್ಸಿನಲ್ಲಿ ಕೂಡ ಒಯಸಬಾರದು.

ಈ ಅಧಿಕಾರದಲ್ಲಿ ಪುರುಷನು ಯಾವ ಸ್ತ್ರೀಯನ್ನೂ ತ್ಯಜಿಸಬೇಕೆಂಬುದನ್ನು ಒಳ್ಳೆಯ ಮಾರ್ಮಿಕ ರೀತಿಯಿಂದ ಹೇಳಿದೆ.

## ದಶಮಾಧಿಕಾರ

ಬ್ರಹ್ಮದೇವನು ಆರಂಭದಲ್ಲಿ ವೇಶ್ಯಾ ಸ್ತ್ರೀಯರನ್ನು ತಮ್ಮ ಪ್ರಿಯರಲ್ಲಿ ಪ್ರೇಮದಿಂದ ಇದ್ದು ಸುಖವೀಯುವಂತೆ ಸಂಕಲ್ಪಿಸಿ ನಿರ್ಮಿಸಿದನು. ಅವರಲ್ಲಿ ಕೆಲವರು ಲಜ್ಜೆಯನ್ನು ತೊರೆದು ವಿಲಾಸಿನಿಯರಾದರು. ಅಪ್ಸರ ಸ್ತ್ರೀಯರು ಸ್ವರ್ಗಲೋಕದ ವೇಶ್ಯೆಯರು. ಅವರಿಂದ ಭೂಲೋಕದಲ್ಲಿ ಉತ್ತಮಾಂಶದ ಸೂಳೆಯರಾದರು. ಅಂಥ ಸೂಳೆಯರನ್ನು ವಿಟರು ಕಾಮಶಾಸ್ತ್ರದ ಪರಿಚಯವುಳ್ಳವರಾಗಿ ಮನವೊಲಿಸಬೇಕು. ಸೂಳೆಯರಲ್ಲಿ ದುಷ್ಟೆಯರೂ ಸಾಧ್ವಿಯರೂ ಇರುವರು. ಕನಿಷ್ಠೆ ನಿಷ್ಠುರೆ ಸಕೋಪೆ ಮತ್ತು ನ್ಯೂನಾಂಗಿಯಾದ ವೇಶ್ಯೆಯನ್ನು ಬುದ್ಧಿವಂತನು ಮುಟ್ಟಬಾರದು. ವಿಟರಲ್ಲಿ ತರುಣರೂ ಕಪ್ಪುರ ಕಸ್ತೂರಿ ತಿಲಕ ತಂಬುಲಗಳಿಂದ ಸೂಳೆಯರ ಮನಸ್ಸನ್ನು ಎಳೆಯುವವರೂ ಆದವರು ಕೃತಾರ್ಥರಾಗುವರು. 'ವರಸೂಪ ಶಾಸ್ತ್ರಭೃಗುಚಿ। ತ್ತರಸಾಳಂಕಾರ ಗಣಿತ ಗಜಹಯವೈದ್ಯಂ ॥' ಇತ್ಯಾದಿ ಪದ್ಯಗಳಲ್ಲಿ ವಿಟನ ಗುಣೋನ್ನತಿ ವರ್ಣಿಸಲ್ಪಟ್ಟಿದೆ. ಇಂಥ ವಿಟರನ್ನು ಸೂಳೆಯರು ಮನೆಗೆ ಕರೆದೊಯ್ದು ಅವರನ್ನು ಮೆಚ್ಚಿಸಲಿಕ್ಕೆ ಶಯ್ಯೆ, ತಾಂಬೂಲ, ಕುಸುಮ, ಅಳಂಕಾರಗಳು ವಿವಿಧ ವಿಳಾಸಗಳು ಮುಂತಾದವುಗಳನ್ನು ಸನ್ನಾಹಗೊಳಿಸಬೇಕು. ಈ ರೀತಿ ವಿಳಾಸಗಳುಳ್ಳ ಸೂಳೆಯರನ್ನು ನಾಗರಿಕ, ವಿಟ, ವಿದೂಷಕ, ಪೀಠಮರ್ದನ

ಎಂಬ ನಾಲ್ಕು ತರದ ಕೆಳೆಯರು ಭೋಗಿಸುವರು. ಅವರು ಭೋಗಿಸುವ ಕ್ರಮವು ಮದನೋತ್ಸವವನ್ನು ಪಿರಿದಾಗಿ ಮಾಡುವಂತಹದಿರುವದು. ಸೂಳೆಯರೂ ವಿಟರೂ ಪರಸ್ಪರ ಪ್ರೀತಿಯಿಂದ ಇರಲು ಅವರಲ್ಲಿ ಇರತಕ್ಕ ಗುಣಗಳನ್ನೂ ಲಕ್ಷಣಗಳನ್ನೂ ಹೇಳಿದೆ. ಈ ಸಂಧಿಯಲ್ಲಿ ಎಷ್ಟೋ ಪದ್ಯಗಳು ಅಶುದ್ಧವೂ ತ್ರುಟಿತವೂ ಆಗಿರುವದರಿಂದ ಕೆಲವೆಡೆಯಲ್ಲಿ ಸಮಂಜಸವಾದ ತಿಳಿವಳಿಕೆ ಹುಟ್ಟುವದಿಲ್ಲ.

## ಏಕಾದಶಾಧಿಕಾರ

ರಸಭಾವಗಳ ವಿಭೇದದಿಂದ ವೇಶ್ಯೆಯರಲ್ಲಿ ಅನೇಕ ಜಾತಿಗಳುಂಟಾಗುವವು. ಅವರವರ ವಿಶೇಷ ಪ್ರಕಾರಗಳೂ ಚೇಷ್ಟೆಗಳೂ ಇಲ್ಲಿ ಹೇಳಲ್ಪಟ್ಟಿವೆ.

ಈ ಅಧಿಕಾರಗಳಲ್ಲಿ ಅನುಸ್ಯೂತವಾದ ಪ್ರಮೇಯಗಳಿಲ್ಲದ್ದರಿಂದ ಬಿಡಿಬಿಡಿ ಪದ್ಯಗಳು ಸೇರಿಸಲ್ಪಟ್ಟಿವೆ. ಆದ್ದರಿಂದ ಅವುಗಳ ಸಾರಾಂಶವನ್ನು ಕೊಡುವುದು ಈ ಚಿಕ್ಕ ಪೀಠಿಕೆಯಲ್ಲಿ ಸಾಧ್ಯವಿಲ್ಲ.

## ಕವಿ ಚಂದ್ರರಾಜ ಮತ್ತು ಅವನ ಪೋಷಕ ರೇಚ'

ಈ ಕವಿಯನ್ನು ಕುರಿತು ಕೆಲವು ಅಂಶಗಳು ಮದನ ತಿಲಕದಿಂದ ತಿಳಿದು ಬರುತ್ತವೆ. ಇವನು ಚಾಳುಕ್ಯ ಚಕ್ರವರ್ತಿ ಜಯಸಿಂಹರಾಜನ ಮಾಂಡಲಿಕನಾದ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತಾಧಿಪತಿ ರೇಚಮಹೀಶನ ಆಸ್ಥಾನದಲ್ಲಿ ಹೆಸರಾಂತ ಕವಿಯಾಗಿದ್ದನು. ರೇಚಿಯು ಜಯಸಿಂಹನ ಅಳಿಯನಾಗಿರಬೇಕೆಂದು 'ಧರಾಧೀಶ ಜಾಪತಿ ಪಾದಾಂಬುರುಹಾದಿಪೂರ್ತ (ರುಹದಿ ಪೂತ) ಸುಮನೋಜಾತಂ' ಎಂಬ ಚಂದ್ರರಾಜನ ವರ್ಣನೆಯಿಂದ ('ಧರಾಧೀಶ ಜಾಪತಿ=ರಾಜನ ಮಗಳ ಗಂಡ) ಮೇಲೆ ಊಹಿಸಿದ್ದೇವೆ. ಇವನು 'ವಿಪ್ರಕುಲಲಲಾಮ' ನೆಂದಿರುವುದರಿಂದ ಬ್ರಾಹ್ಮಣ ಕವಿ; ಶೈವ; ವಾಜಿಗೋತ್ರೋದ್ಭವನು; ಮಹಾಕವಿಯೂ, ಸತ್ಯನಿಧಿಯೂ, ಕವಿತಾಮಹಾರ್ಣವನೂ ಆಗಿದ್ದನು. ರೂಪಲಾವಣ್ಯ ಸಮೇತನಾದ್ದರಿಂದ ಅವನಿಗೆ 'ಪ್ರತ್ಯಕ್ಷ ಕಂದರ್ಪ'ನೆಂಬ ಬಿರುದು ಇತ್ತು. ವ್ಯಾಕರಣ, ಅರ್ಥಶಾಸ್ತ್ರ, ಗಣಿತ, ಅಲಂಕಾರ, ಕಾವ್ಯ, ನಾಟಕ, ಕಾಮಸೂತ್ರ, ನೃತ್ತ, ಗೀತ,

ಅಶ್ವಶಾಸ್ತ್ರ, ಗಾಂಧರ್ವ, ತರ್ಕಶಾಸ್ತ್ರ ಮುಂತಾದ ವಿದ್ಯೆಗಳಲ್ಲಿ ನಿಷ್ಣಾತನಾದ ಈ ಕವೀಂದ್ರನು ೬೪ ಕಲೆಗಳಲ್ಲಿ ಪರಿಣತಿಯನ್ನು ಹೊಂದಿದ್ದನು.

'ಕವಿಪತಿ' ಚಂದ್ರರಾಜನು 'ಕೃತಿಪತಿ' ಯಾದ ರೇಚನೃಪನ ಆಜ್ಞೆಯ ಮೇರೆಗೆ ಮದನ ತಿಲಕವೆಂಬ ಕಾಮಶಾಸ್ತ್ರವನ್ನು 'ಅನುಭವಣೆಗವಾಗಮುಕ್ಕ ಮಳವಡೆ' 'ನೀತಿಗೊಡಂಬಡುವಂದದಿ' ಹೇಳಿದನು. ಇದನ್ನು ಬ್ರಹ್ಮನೆಂಬ ಕವಿಯು ತಿದ್ದಿದನು. ಇದರಿಂದ ಇದು ಪಂಡಿತರ ಹೊಗಳಿಕೆಗೆ ಪಾತ್ರ ವಾಯಿತು.

ರೇಚಭೂಪನ ಹೆಸರನ್ನು ಕವಿಚರಿತೆಕಾರರು ಮಾಚನೃಪನೆಂದು ಕೊಟ್ಟಿ ದ್ದಾರೆ. ನಮಗೆ ಸಿಕ್ಕ ಪ್ರತಿಗಳಲ್ಲಿ ರೇಚ, ರೇಚಿಗ, ರೇಚಿಮಂತ್ರೋದ್ಭವ ಎಂದೇ ನಿರ್ದೇಶವಿರುವದರಿಂದ 'ಮಾಚ' ಎಂಬ ಪಾಠವು ಅವರಿಗೆ ಹೇಗೆ ಸಿಕ್ಕಿತೋ ತಿಳಿಯದು. ಈ ವಿಷಯದ ವಿವರಣೆಗಾಗಿ ಮೈಸೂರು ಹಸ್ತಲಿಖಿತ ಗ್ರಂಥಾಲಯಕ್ಕೆ ಬರೆದು ಕೇಳಲಾಗಿ ಅಲ್ಲಿಯ ಅಧಿಕಾರಿಗಳು ಆರ್. ನರ ಸಿಂಹಾಚಾರ್ಯರ ಪಾಠ ರೇಚ ಎಂದೇ ಇತ್ತು. ಆದರೆ 'ಅಂಗನೃಪಾಯತಿ ತುಂಗಭುಜಂ....' ಎಂಬ ಪದ್ಯದ ಬಂಧವನ್ನು ಸರಿಪಡಿಸಲಿಕ್ಕೆ ಮಾಚವು ಅವಶ್ಯವಾದ್ದರಿಂದ ಪೋಷಕನ ಹೆಸರನ್ನು ಅವರು 'ಮಾಚ' ಎಂದು ತಿದ್ದಿ ರುವುದಾಗಿ ಉತ್ತರಿಸಿದರು.

ರೇಚನು ಚಾಳುಕ್ಯ ಚಕ್ರವರ್ತಿ 'ಕೀರ್ತಿವಿದ್ಯಾಧರ' ಜಯಸಿಂಹದೇವನ ವಿಶ್ವಸ್ತ ಅಧಿಕಾರಿಯು. ಅವನ ಪೋಷಣೆಯಲ್ಲಿ ಬೆಳೆದು ಅವನಿಂದ 'ಪಂಚ ಮಹಾಶಬ್ದ'ಗಳ ಮರ್ಯಾದೆಯನ್ನೂ ಮಹಾಸಾಮಂತ ಪದವಿಯನ್ನೂ ಪಡೆದು ರಾಜನ ಪ್ರೀತಿಗೆ ಪಾತ್ರನಾಗಿದ್ದನು. ರೇಚಿಗನು ಅತ್ಯಂತ ಶೂರನಾದ ಮಾಂಡಲಿಕನಾಗಿದ್ದು ತನ್ನ ಪ್ರಭುವಿಗೆ ಬಂದ ಗಂಡಾಂತರವನ್ನು ನಿವಾರಿಸಿ ಸಿಂಹಾಸನದ ದೌಸ್ಥ್ಯವನ್ನು ಪರಿಹರಿಸಿದನೆಂದು ಹೇಳಿದೆ. ಈ ಗಂಡಾಂತರವು ಆವುದಿರಬೇಕೆಂಬುದನ್ನು ಸ್ವಲ್ಪ ವಿವೇಚಿಸುವ.

ಚಾಳುಕ್ಯ ವಂಶಾವಳಿಯಲ್ಲಿ ಇಬ್ಬರು ಜಯಸಿಂಹ ದೇವರು ರಾಜ್ಯಭಾರ ವನ್ನು ಮಾಡಿದರು. ಒಬ್ಬನು ೧೧ನೆಯ ಶತಮಾನದಲ್ಲಿ (ಕ್ರಿ. ಶ. ೧೧೧೪-೧೦೪೨) ಆಳಿದನು; ಇನ್ನೊಬ್ಬನು ಪೆರ್ಮ-ಜಗದೇಕಮಲ್ಲನೆಂಬ ಹೆಸರಿನಿಂದ ೧೨ನೆಯ ಶತಮಾನದಲ್ಲಿ (ಕ್ರಿ. ಶ. ೧೧೩೮-೧೧೫೧) ರಾಜ್ಯಭಾರ ಮಾಡಿದನು.

ಪ್ರಕೃತ ರೇಚಿಗನ ಪ್ರಭು ಜಯಸಿಂಹನು ೧೧ನೆಯ ಶತಮಾನದವನಿರಬೇಕು. **ಚೋಳಕುಲವಿಲಯಕಾಲಂ, ಮಾಳವರಾಜಕಶೂಲಂ, ಮಗಧೋರ್ವೀಪಾಲನೀಲಾರ್ತಿ** ಮುಂತಾದ ಅನ್ವರ್ಥಕ ವಿಶೇಷಣಗಳು ಅವನಿಗೇ ಅನ್ವಯಿಸುತ್ತವೆ. ಬಳ್ಳಿಗಾವೆಯ ಒಂದು ಶಾಸನದಲ್ಲಿ (ಎಪಿಕ. ಶಿಕಾ. ೧೨೫) 'ರಾಜೇಂದ್ರ ಚೋಳಗಜ ಮೃಗರಾಜಂ' ಎಂದು ಕರೆಯಲ್ಪಟ್ಟಿದ್ದಾನೆ. ರಾಜೇಂದ್ರನ ೬ನೆಯ ವರ್ಷದ ತಂಜಾವೂರ ಶಾಸನದಲ್ಲಿ ಅವನು ಎಡೆತೊರೆ (ರಾಯಚೂರು ಪ್ರಾಂತ) ವನವಾಸಿ ಕೊಳ್ಳಿಪಾಕೆಗಳನ್ನು ಆಕ್ರಮಿಸಿದಂತೆ ಹೇಳಿದೆ. ಅವನ ಉಳಿದ ಶಾಸನಗಳಲ್ಲಿ ರಾಜೇಂದ್ರನ ಎದುರಿಗೆ ಜಯಸಿಂಹನು ಬೆನ್ನು ತೋರಿಸಿ ಓಡಿ ಹೋದನೆಂದು ಬರೆದಿದೆ. ಚಾಳುಕ್ಯರ ಶಾಸನಗಳಲ್ಲಿ ಚೋಳರು ಸೋತರೆಂದು ಹೇಳಿದೆ. ಚೋಳ-ಚಾಳುಕ್ಯರ ಸಂಗ್ರಾಮಗಳು ತೈಲನ ಕಾಲದಿಂದಲೂ ನಡೆದೇ ಇವೆ. ಈ ಜಯಸಿಂಹನ ಕಾಲದಲ್ಲಿ ಚೋಳರು ಚಾಳುಕ್ಯರ ರಾಜ್ಯದ ಬಹುಭಾಗವನ್ನು ಆಕ್ರಮಿಸಿದಂತೆ ತೋರುತ್ತದೆ. ಆಗ ಚಾಳುಕ್ಯರು ಶೌರ್ಯದಿಂದ ಹೋರಾಡಿ ಚೋಳರನ್ನು ಹೊರದೂಡಿರಬೇಕು. ರೇಚಭೂಪನು ತನ್ನ ಪ್ರಭುವಿಗೆ ತಕ್ಕ ಸೇವೆಯನ್ನು ಸಲ್ಲಿಸಿ ಚಾಳುಕ್ಯ ರಾಜ್ಯವನ್ನು ನಿಷ್ಕಂಟಕ ಮಾಡಿದನೆಂದು ತಿಳಿಯಬಹುದು. ಚೋಳರು ಅಷ್ಟಕ್ಕೆ ಸುಮ್ಮನಿರದೆ ೧ನೆಯ ಸೋಮೇಶ್ವರನ ಕಾಲದಲ್ಲಿಯೂ ೬ನೆಯ ವಿಕ್ರಮಾದಿತ್ಯನ ಕಾಲದಲ್ಲಿಯೂ ಕುಂತಳ ದೇಶದ ಮೇಲೆ ಸತತ ದಾಳಿಗಳನ್ನು ನಡೆಸಿಯೇ ಇದ್ದರು. ವಿಕ್ರಮಾದಿತ್ಯನು ಪಟ್ಟಕ್ಕೆ ಬಂದಮೇಲೆ ಅವನ ಅಣ್ಣ ೨ನೆಯ ಸೋಮೇಶ್ವರನ ಪಕ್ಷವನ್ನು ಹಿಡಿದು ಚೋಳರು ಚಾಳುಕ್ಯ ಸಿಂಹಾಸನವನ್ನು ಬುಡಮೇಲು ಮಾಡಲು ಪ್ರಯತ್ನಿಸಿದಾಗ ವಿಕ್ರಮಾದಿತ್ಯನ ವಿಶ್ವಾಸಿ ಮಾಂಡಲಿಕನಾದ ಮಾಧವಭಟ್ಟನು ಅದನ್ನು ಉಳಿಸಿದನೆಂದು ಅಕ್ಕಲಕೋಟೆಯ ಶಾಸನದಲ್ಲಿ ಹೇಳಿದೆ. ಜಯಸಿಂಹನ ಕಾಲದಲ್ಲಿ ಇದೇ ಪರಿಸ್ಥಿತಿಯುಂಟಾದಾಗ ರೇಚಿಗನು ಆ ಗಂಡಾಂತರವನ್ನು ಪರಿಹರಿಸಿರಬೇಕು.

ಕಾವ್ಯಾವಲೋಕನ ಕರ್ತನಾದ ನಾಗವರ್ಮನು ೧೨ನೆಯ ಶತಮಾನದಲ್ಲಿದ್ದನು. ಅಲ್ಲಿ ಉದಾಹೃತವಾದ

ತನಗಿಲ್ಲದ ಭಯಮುಂ ತೈ<br>
ಲನಾಂತ ರಿಪುನೃಪರ್ಗೆ ಕುಡುವನವರ್ಗಿಲ್ಲದುದಂ ॥

ವಿನುತಜಯಶ್ಲಾಘ್ಯಯಶೋ

ಧನಮಂ ತಾನೀಟ್ಟು ಕೊಳ್ವನೇನಚ್ಚರಿಯೊ ॥ ೮೨ ॥

ಎಂಬ ತೈಲನೃಪನಿಗನ್ವಯಿಸುವ ಹಳೆಯ ಪದ್ಯವನ್ನು

ತನಗಿಲ್ಲದ ಭಯಮಂ ಕೊ–

ಟ್ಟು ನಿರಂತರಮನ್ಯ ನೃಪರೊಳಿಲ್ಲದ ಭಯಮಂ ॥

ಘನಶೌರ್ಯಮುಮಂ ಕೊಂಡಂ

ಮೊನೆಯೊಳು ರೇಚಿಗನುಹೀಶನೆನಲಚ್ಚರಿಯೇ ॥೧೨೬॥

ರೇಚಿಗನಿಗೆ ಹತ್ತುವಂತೆ ಮಾರಿಸಿ ಹೇಳಿದೆ. ಇದರಿಂದ ಇಬ್ಬರೂ ಕವಿಗಳಿಗೆ ತೈಲನ ಕಾಲದ ಕಾವ್ಯದಲ್ಲಿದ್ದ ಪದ್ಯ ಮೂಲವಾಗಿರಬೇಕೆಂದು ತಿಳಿಯುವದು ಯುಕ್ತ.

ಚಂದ್ರರಾಜನ ಕಾವ್ಯವು ರಂಜಿಸುವ ಶೈಲಿಯಲ್ಲಿ ಬರೆಯಲ್ಪಟ್ಟಿದೆ. ವಿಷಯವು ಕಾಮಶಾಸ್ತ್ರವಾಗಿದ್ದರೂ ಅದನ್ನು ನಿರೂಪಿಸುವ ನೀತಿಯು ಪ್ರೌಢವಾಗಿದೆ. ಇಲ್ಲಿ ಬಳಸಿದ ಛಂದಸ್ಸು ಅನೇಕ ಹೊಸ ಮಾದರಿಯ ವೃತ್ತಗಳನ್ನು ಬೆಳಕಿಗೆ ತರುತ್ತದೆ. ಶಬ್ದಾಲಂಕಾರದಲ್ಲಿ ಈ ಕವಿಯ ಪ್ರಭುತ್ವವು ಅಪ್ರತಿಮವಾಗಿದ್ದಂತೆ ತೋರುತ್ತದೆ. ಪದ್ಯಗಳನ್ನು ವಿವಿಧ ಬಂಧಗಳಲ್ಲಿ ಹಾಕಿ ತನ್ನ ಕೌಶಲವನ್ನು ಪ್ರಕಟಿಸಿದ್ದಾನೆ. ಚಕ್ರವೃತ್ತ (ಪು. ೪), ಮುರಜಬಂಧ, ಗೋಮೂತ್ರಿಕೆ (ಪು. ೪, ೭), ಪಣವಬಂಧ, ಗೋಮೂತ್ರಿಕೆ (ಪು ೧೦) ಅರ್ಧಪಾದಗತ ಪ್ರತ್ಯಾಗತ, ಮುರಜ, ಪಣ, ಗೋಮೂತ್ರಿಕೆ, ಜತ್ತರಟ್ಟ, ಆದ್ಯಂತಪ್ರಾಸ ಯಮಕ, ಜತ್ತರಟ್ಟ, (ಪು. ೧೧) ಶ್ಲೇಷೆಯ ಕಂದ (ಪು. ೧೨) ಇವುಗಳಲ್ಲದೆ, ಏಕಾಕ್ಷರಿಕಂದ, ದ್ವ್ಯಕ್ಷರಿ, ತ್ರ್ಯಕ್ಷರಿ (ಪು. ೩೭) ಅಕಾರಾಂತಕಂದ (ಸದರ), ನಿರೋಷ್ಠ್ಯಕಂದ, ಓಕಾರಾಂತಕಂದ (ಪು ೩೮) ಓಕಾರಾಂತಮುಮೇಕಾರಾಂತಮುಮೊಡಗೂಡಿದ ಕಂದ (ಪು ೩೯) ಮೊದಲಾದವುಗಳು ಈ ಕವಿಯ ಭಾಷೆಯ ಪ್ರಭುತ್ವವಲ್ಲದೆ ಅಪ್ರತಿಮ ಕವಿತಾ ಶಕ್ತಿಯನ್ನೂ ತೋರಿಸುತ್ತಿವೆ. ನಾಗವರ್ಮನು ಕಾವ್ಯಾವಲೋಕನದಲ್ಲಿ ಹೇಳಿದಂತೆ ಈ ತೆರದ ಶಬ್ದಚಾತುರ್ಯ–ಬಂಧ ಚಮತ್ಕೃತಿಗಳು ಓದುಗರಲ್ಲಿ ಶಾಬ್ದೀ ಅಭಿರುಚಿಯನ್ನು ಹುಟ್ಟಿಸುವವೇ ವಿನಾ ಅರ್ಥ ಗೌರವಕ್ಕಾಗಿಯಾಗಲಿ ರಸಪೋಷಣೆಗಾಗಲಿ ಸಹಕಾರಿಗಳಾಗಲಾರವು. ಇವನ ಶೈಲಿಯು ಸಾಮಾನ್ಯವಾಗಿ ಪಂಪ–ರನ್ನರ ಛಾಯೆ

ಯುಳ್ಳದ್ದಾಗಿದೆ. 'ಪೇಳ್ಗೆನೆಸೆಯೆ ಪೊಸಕನ್ನಡದಿಂ' ಎಂದು ಹೇಳಿಕೊಳ್ಳು ವದರಿಂದ ಇವನ ಕಾಲದಲ್ಲಿ (ಕ್ರಿ. ಶ. ೧೧ನೆಯ ಶತಮಾನದ ಮಧ್ಯಭಾಗ) ಭಾಷೆಯು ಅದೇ ಆಗ ಹೊಸತಾಗಿ ರೂಪುಗೊಳ್ಳುತ್ತಿತ್ತೆಂದು ತಿಳಿಯಬಹುದು. ಇವನು ಅಲ್ಲಲ್ಲಿ ಅರ್ಥಪೂರ್ಣವಾದ ನಾಣ್ಣುಡಿಗಳನ್ನು ತೋರಿಸಿ ತನ್ನ ಕವಿತೆಗೆ ಕಳೆ ತಂದಿದ್ದಾನೆ. ಉದಾಃ—

ಬಳ್ಳರಿಗೆ ಪುಯ್ಯಲ್ಲಬಂದ ಕುಱಿಯಂತಕ್ಕುಂ— ಪುಟ ೪೯
ಪುಣ್ಕೆಟ್ಟಡೆ ಕಲೆ ಕೆಡದೆನಿಪಂತೆ — ,, ೭೦
ಆಡಂನಾಯ್ಕಾಡಿ ತಿಂದರೆಂದಡೆ — ,, ೭೧
'ಗತಾನುಗತಿಕೋ ಲೋಕ' ಎನಿಪಂತೆ (೧,೫೫)
ಜಗತೀ ತಳದೊಳಪುತ್ರಸ್ಯ। ಗತಿರ್ನಾಸ್ತಿಯುಮೆನಿಪ್ಪ
(ಕಿಲೆನಿಪ್ಪ) (೧೬೫)

ಇತ್ಯಾದಿ ವಾಕ್ಯವೇಷ್ಟನಗಳು ಪ್ರಯೋಗಿಸಲ್ಪಟ್ಟಿವೆ.

ಈ ಕವಿಯು ಬೇರೆ ಕೃತಿಗಳನ್ನು ಒರೆದಿದ್ದರೆ ಅವಾವುವೂ ಉಪಲಬ್ಧ ವಿಲ್ಲ. "ಅಖಿಳನಾನಾಛಂದ । ಕ್ಯಧಿಕೃತಮಿದೆಂದು" (೧.೫೭) ಚಂದ್ರರಾಜನು ಹೇಳುವಂತೆ ವೃತ್ತಬಂಧಗಳಿಗೆ ಪ್ರಕೃತ ಗ್ರಂಥವನ್ನು ಆಕರವಾಗಿ ಇಟ್ಟು ಕೊಳ್ಳಬಹುದು. ಇವನು ಹೇಳುವ ಕೆಲವು ವೃತ್ತಗಳ ಹೆಸರುಗಳೂ ಲಕ್ಷಣ ಗಳೂ ಕನ್ನಡ ಮತ್ತು ಸಂಸ್ಕೃತ ಛಂದೋ ಗ್ರಂಥಗಳಲ್ಲಿ ಕಂಡುಬರುವದಿಲ್ಲ. ಕೆಲ ಬಂಧಗಳೂ ವೃತ್ತಗಳೂ ಪ್ರಸ್ತಾರಕ್ಕೆ ಅಣಿಯಾಗುವದಿಲ್ಲ. ಈ ವಿಷಯ ದಲ್ಲಿ ಹೆಚ್ಚಿನ ಸಾಮಗ್ರಿಗಳನ್ನು ಒದಗಿಸಿಕೊಂಡು ಸಂಶೋಧನೆ ಮಾಡುವದು ಅವಶ್ಯವಿದೆ.

*

ಶ್ರೀ

# ಚಂದ್ರರಾಜಕವಿ ವಿರಚಿತಂ

# ಮದನತಿಲಕಂ

---

[೧]ಶ್ರೀವಧುವಿಂಗಗಜೆಗೆ ವಾಕ್
ಶ್ರೀವಧುವಿಂಗಜನನಜನನಜನಂ ಕುಸುಮಾ ॥
ಸ್ತ್ರಾವಳಿಯಿಂದೋಲೈಸಿದ
ಭಾವೋದ್ಭವನೀಗೆ ನಮಗೆ ಸುಖಸಂಪದಮಂ ॥ ೧ ॥

ಶ್ರೀಯುನುರಃಸ್ಥಲದೊಳ್ವಾ
ಕ್ಶ್ರೀಯುಂ ನಿಜವದನಕಮಲದೊಳ್ ಕೂರ್ತ ಜಯ- ॥
ಶ್ರೀಯುಂ ಭುಜದೊಳ್ ಕೀರ್ತಿ
ಶ್ರೀಯುಂ ದಿಕ್ತಟದೊಳ್ನಿಲಿ (ಳಿರಿ) ಸಿದಂ[೨] ರೇಚನೃಪಂ ॥ ೨ ॥

---

೧. ಮೈಸೂರು ಪ್ರತಿಯಲ್ಲಿ (ಕ) 'ಶ್ರೀ ಆದಿಗಣನಾಥಾಯನಮಃ ಶ್ರೀ ಶಾರದಾ ಗುರುಭ್ಯೋನಮಃ ಶುಭಮಸ್ತು' ಎಂದು ಆರಂಭದಲ್ಲಿ ಬರೆದಿದೆ. ಮದ್ರಾಸ ಪ್ರತಿಯಲ್ಲಿ (ಗ) 'ಶ್ರೀ ವೆಂಕಟೇಶಾಯ ನಮಃ। ಶ್ರೀ ಹಿರಣ್ಯಗರ್ಭಾಯ ನಮಃ । ಶ್ರೀ ಸದಾಶಿವಾಯ ನಮಃ । ಶ್ರೀ ಶಾರದಾ ಪರಮೇಶ್ವರ್ಯೈ ನಮಃ । ಶ್ರೀ ಗಣಾಧಿಪತಯೇ ನಮಃ । ಶುಭಮಸ್ತು । ಶೋಭನಮಸ್ತು । ಆಯುರಾರೋಗ್ಯ ಐಶ್ವರ್ಯಮಸ್ತು । ಚಿರಾಯುಷ್ಯಮಸ್ತು । ಜಯಜಯ ಮಾಂಗಲ್ಯಮಸ್ತು । ಮದನತಿಲಕ ಪುಸ್ತಕಕ್ಕೆ ಸರ್ವಸಿದ್ಧಿರಸ್ತು । ಶ್ರೀ ಶ್ರೀ' ಎಂದು ಬರೆದಿದೆ.

೨. ಗ. ದೊಳೊಲಿಸಿದಂ;

ತ್ರಿಜಗದ್ವ್ಯಾಪಿತ ಕೀರ್ತಿ ಕುಂತಳಧರಾಧೀಶಂ ದ್ವಿಷದ್ಭೂಮಿಪ
ವ್ರಜಕಾಲಂ ಹರಿಮೂರ್ತಿ ನಿರ್ಮಳಗುಣಂ ಸಿಂಹಾಸನಾಧಿಷ್ಠಿರ (ತ)ಂ ॥
ವಿಜ[1]ರಾಧ್ಯಂ ವಿಳಾತಿವರ್ತಿ ಜಯಸಿಂಹಂ ದೇವದೇವಾಂಘ್ರಿಪಂ-
ಕಜಭೃಂಗಂ ನುತಚಕ್ರವರ್ತಿತಿಲಕಂ ಚಾಣೂ (ಳು)ಕ್ಯ ವಂಶೋತ್ತಮಂ
|| ೩ ||

ಬೀ ವದ್ದಿವ್ವ[?]ಸಮವರ್ತಿ ಕಂ(ಟ)ಕ ಶಿರೋವ್ಯತ್ಯಕ್ತೀರ್ತಿ ಸಮ್ಯಗ್ಜಿತಾ
ಖಿಳ ಪೃಥ್ವೀವರ ಲಾಭಪೂರ್ತಿ ಮಗಧೋರ್ವೀಪಾಲ ನೀಲಾರ್ತಿ ಕುಂ-॥
ತಳದೇಶೋದ್ಭವ ಚಕ್ರವರ್ತಿ ಭುವನಪ್ರೋತ್ಕೀರ್ತಿ ಲುಪ್ತಪ್ರಜಾ
ಕುಳಪಿಶ್ವಾರ್ತಿ ಮುಕುಂದಮೂರ್ತಿ ನೆಗಳ್ದಂ ಶ್ರೀಕೀರ್ತಿವಿದ್ಯಾಧರಂ ||೪||

ಚೋಳಕುಲ ವಿಲಯಕಾಲಂ
ಕಾಳಮುಖ ಪ್ರಾಪಿತೋದ್ಧತಾಹಿತ[2] ಮಾಳಂ ॥
ಮಾಳವರಾಜಕ ಶೂಲಂ
ಶೂಲಾಯುಧ ಚರಣ ಕಮಲ ಭೃಂಗಂ ಸಿಂಗಂ || ೫ ||

ಎನಿಪ ಜಯಸಿಂಹ ದೇವನ
ಮನುಚರಿತನ ತೊಡೆಯೆ ತೊಟ್ಟಿಲಾಗಿರೆ ಬಳೆದಂ ॥
ವಿನಯಾಂಬುರಾಶಿ ವರಬುಧ
ನನತಾಂಘ್ರಿ (ತಾರಿ) ಕಿರೀಟಕೋಟಿ ಘಟ್ಟಿತ ಚರಣಂ || ೬ ||

ಅಮಿತ ಗುಣಂ ರೇಚಂ ವಿ
ಕ್ರಮದಿಂದಂ ಸ್ವಸ್ತಿ ಸಮಧಿಗತ ಪಂಚಮ ಶ- ॥
ಬ್ದಮಹಾಸಾಮಂತಾಸ್ಪದ-
ಮುಮೆಲ್ಲಮಂ ಪಡೆದನೀಯೆ ಜಯಸಿಂಹ ನೃಪಂ || ೭ ||

---

೧. ಇಲ್ಲ ಮಾತ್ರೆಗಳು ಕಡಮೆ ಇರುವವು. ೨ ಪ್ರಾಪ್ತತೋದ್ಧತಾ

ಪಿರಿಯರ ಪೆಸರ್ವೇಳ್ದಿವ್ರ್ಕಂ
ಪೊರೆವಾಳಾಪಾಳಿಯುವರೆಮುನ್ನದೆ ಪತಿಯುಂ ॥
ಪಿರಿಯಂನಂ[೧] ಶೌರ್ಯದೆ ಮೆಚ್ಚಿಸಿ
[೨]ಪರಮ ಮಹಾಸ್ಪದಮನೆಯ್ದೆ ಪಡೆದಂ ರೇಚಂ ॥ ೮ ॥

ಪ್ರತಿಪತ್ತಿಯು ವೈಮೆಯು ನಾ-
ನತಿಶಯಿಸಲು ಕರೆಯೆ ಕೇಳಿ[೩] ಸಿಂಹಾಸನ ದಾ- ॥
ಸ್ಥಿತಿಯುಳಿಯೆ ರೇಚಗಾತ್ರ-
ಪ್ರತಿಪತ್ತಿಯನಿತ್ತನೊಸೆದು ಜಯಸಿಂಹ ನೃಪಂ ॥ ೯ ॥

ಸ್ಫುರಿತೋದ್ಯನ್ನಕ್ರಚಕ್ರ ಕ್ಷುಭಿತ ಫಣಿಫಣಾಭೀಳ ರತ್ನಪ್ರಭಾ ಭಾ
ಸುರಗಂಭೀರಾಬ್ಧಿ ವಿಸ್ತಾ (ಸ್ತಾ)ರಿತ ನಿಖಿಳ ಧರಾದೇವಿಯುಂ ದೇವ
ಭೂಮಿ ॥
ಶ್ವರ ಮಸ್ತನ್ಯಸ್ತಪಾದಾಂಬುಜ ಜಯ ಜಯ ಸಿಂಹಾವನೀಶಂಗೆ ವೀರ್ಯಾ
ಭರಣಂ ನಿಷ್ಕಂಟಕಂ ಮಾಡಿದನತುಳ ಬಲವ್ರಾ(ಭ್ರಾ)ಜಿತಂ
ರೇಚಭೂಪಂ ॥ ೧೦ ॥

ಮಳಯಾಂಧ್ರಾರ್ಬುದ ಮಾಗಧ ದ್ರವಿಳವೆಂಗೀ ವಂಗ ನೇಪಾಳ ಕೇ
ರಳ ಪಾಂಚಾಳ ಕಳಿಂಗ ಕೊಂಕಣ ಸುರಾಷ್ಟ್ರಾ[೪]ಭೀಳ ಕಾಶ್ಮೀರ ಕೋ ॥
ಸಲ ಲಂಪಾಕ ತುರುಷ್ಕ ಗೌಳ ಕಸ ಕಾಮಾಕ್ಷೀಂದ್ರ ಕಾಂಭೋಜ ಸಿಂ
ಹಳ ದೇಶಾಧಿಪರಂ ಭಯಂಗೊಳಿಸಿದಂ ವಿಕ್ರಾಂತದಿಂ ರೇಚಿಗಂ ॥ ೧೧ ॥

ಸಕಲಪ್ರತ್ಯರ್ಥಿ ಧಾತ್ರೀಪರಿತಲ (?) ಪರಿವ್ರಢ ಗೀರ್ವಾಣ ನಿರ್ವಾ
ಣಕರಂ ಶುಭ್ರಾಭ್ರ ದುಗ್ಧಾರ್ಣವ ಪುರಹರಗೋರಾಜ ಗೋರಾಜ
ಗೋರಾ- ॥
ಜ ಕರೀಂದ್ರ ಶ್ವೇತಪದ್ಮ ತ್ರಿದಿವಭವಧುನೀ . . . ಹಾರ ನೀಹಾ
ರ ಕರಾರ್ಧೇಂದು ಪ್ರಭಾಭಾಸುರ ವಿಶದಯಶಂ ನೀತಿಮಾಂಧಾತ
ಭೂಪಂ ॥ ೧೨ ॥

---

೧. ಪಿರಿದುಂ ಎಂದು ಇರಬೇಕು. ೨. ಗ. ಸಮರಮುಮಹಾಸ್ಪದಮ
೩. ಗ. ಕರೆಯೆ . ದು ಸಿಂಹಾಂ ೪. ಕ. ಸೌರಾಷ್ಟ್ರಾ

ಮಾಲಿನೀ ||

ಅಭಿನವ ಭಗದತ್ತಂ ಭೋಗದೊಳ್ಚಾರುದತ್ತಂ
ಸ್ವಭುಜವಿಜಯಸಾರ್ಥಂ (ಪಾರ್ಥಂ) ಖಂಡಿತಾರಾತಿ ಪಾರ್ಥಂ
(ಸಾರ್ಥಂ) ||
ಸುಭಟಕಟಕ ಸಾಮಂತಾವತಂಸಂ ಘನಾಂಸಂ
ವಿಭವಜಿತಬಿಡೌಜಂ ರೇಚಕಾಂತಾ ಮನೋಜಂ || ೧೩ ||

ಇದು ಚಕ್ರವೃತ್ತಮುಕ್ಕಂ
ಗಂಗಾ ಚಂದ್ರ ಹಿಮಾಚಲಾಭಯಶನುತ್ತ (ತ್ರ) ಪ್ರೋಗ್ರರಾಜ ಪ್ರಭಂ
[1]ಗಂಗೋದ್ಭೂಷ್ಟಿರ ಶಕ್ರನಪ್ರಿಯತಮೋಮಿತ್ರಂ ದಿವಾಕೃತ್ಸಮು ||
ತ್ತುಂಗಾರಾಜಿತ ಸದ್ವಿಪಂ ನಯವಿದಂ ದುರ್ಗಾಭ್ರಪಾತದ್ರ (ದ್ರು) ಮಂ
ವಂಗಾಂಗಾಂಧ್ರ ಕಳಿಂಗ ವಾರ್ಜತುಹಿನಾಭಂ ರೇಚಿ ಮಂತ್ರೋದ್ಭವಂ
|| ೧೪ ||

ಇದುವೆ ಎಡೆಯಕ್ಕರಮುಂ ಕಿರಿಯಕ್ಕರಮುಂ ಚೋಪದಿಗೆಯುಂ, ಎರಡು ಷಟ್ಪದಿಯುಂ ತ್ರಿಪದೋನ್ನತಿಯುಂ ವಲ್ಲಮುಖಿಯುಂ [2]ರಾಟಮುಂ ಚಿತ್ರ ಪದಕಮುಂ ಕಮಳಮುಂ ಚಂದ್ರಿಕೆಯುಮಿಂದುಮುಖಿಯುಂ ಮೊದಲಾಗೆ ಲೞ ವೃತ್ತಮುಂಟಾದ[3] ಮುರಜಬಂಧಮುಂ ಗೋಮೂತ್ರಿಕೆಯುಮುಕ್ಕಂ.

ಅಂಗನೃಪಾಯುತಿ ತುಂಗಭುಜಂ ಕಲಿ
ಯ (ಯಿ)ಂಗಿತ ಶಿಷ್ಟತಸಂದುಯಶಂ ||
ಪಿಂಗಜದೊಂಗತ ಭೃಂಗಕಚಂ ಕವಿ
ಮುಂಗಳಲಕ್ಷಣಯುಕ್ತನಿವಂ ||
ಸಂಗರಕೇಸರಿ ಸಂದಗುಣಂ ಬಲಿ
ಭೃಂಗರದಕ್ಷನುವಾಯುತನುಂ ||
ಸಂಗದ ಸನ್ಮತಿ ವಂಗವಹಂ ಸಲೆ
ಭಂಗಿಯನೀಕ್ಷಿಸಿ ರೇಚನೃಪಂ || ೧೫ ||

---

೧. ಗ. ಗಂಗೇಂದ್ರಪ್ರಷ್ಟಿರ ೨. ಗ. ತ್ರಾಟ [ಕ] ಮುಂ ೩. ಗ. ಲೞ ವೃತ್ತಮುಂ ಪಾದಮುರುಜ ಚಂಡಮೂಲ ಗೋಮೂತ್ರಿಕೆಯುಮುಕ್ಕಂ

ಕಂದ||

ಸುರಹಿತನಲ್ಲದೆಯುಂ ತಾಂ
ಸುರಹಿತಕರನರಸನಲ್ಲದರಸಂ ಕಮಳಾ ||
ಕರನಲ್ಲದೆಯುಂ ಕಮಳಾ
ಕರನೆನಿಕುಂ ರೇಚನೃಪತಿ ವಿಶ್ವಂಭರೆಯೊಳ್ || ೧೬ ||

ಪಿರಿಯಕ್ಕರ ||

ಅತನುವಲ್ಲದ ಪರಿಭವಂ ಬಡೆಯದ ಪೆಸರ ಸೌಭಾಗ್ಯಕ್ಕೆ ಕೆಳಿಗೊಳ್ಳದ
ರತಿಗೆ ಸೋಲದ ಬೈಗುಳಿಂಗೆ ಪಕ್ಕಾಗದೋಪರಂ ಮರುಗಿಸಿ ಬಿಸುಸುಯಿಸದ||
ಸತತಮತಿ ಕೃಷ್ಣನಲ್ಲದ ಕೂರದರ ದಂಡಿಸಲು ನೆರೆವ
ವ್ರತಕೆ[1] ತಪ್ಪದ ಕಾಮನಪ್ಪುದರಿಂದಭಿನವ ಕಾಮಂ ರೇಚ ನೃಪಂ || ೧೭ ||

ಕಾಮದೇವ ದತ್ತಕ (. . .) ದ್ರಿಂದ ಮಾನಗ್ಗಳಂ ಸೊಬಗಿನೊಳಿಂದು ಪೊಂಗಿ
ತಾಮೆ ತಮ್ಮ ಮನೆಗಳೊಳು ಪಾಡಿಸುವರೆಲ್ಲರುಂ[2] ಕೂರ್ತು ಬಂದು ||
ತಾಮೆ ಲಂಚಮನಿತ್ತೊಡಗೂಡಿರ್ದು ಸೊಬಗಂ ಪಾಡಿಸುವುದು ಚದುರಗಪ್ಪಂ
|| ೧೮ ||

ಕುರುಳಂ ಚೆಂಬೊನ್ನಂ ಕೇಶವಂ ಮುಂಗೈಯ್ಯಂ ಹಾರಮಂ ಕೇಯೂರಮಂ
ಬೆರಲಂ ಮೆಯ್ಯಂ ವಸ್ತ್ರಂಗಳಂ[3] ಪದಕಮಂ ಕೇಯೂರ ಕುಂಡಲಮಂ ||
ಸರಿಗೆಯೆಂಬಿವಂ ಕೊಟ್ಟು ಮೂವಣ್ಣಂ ಬಂದು ಕಪ್ಪುಗಳಂ ಕಚ್ಚಿ ಬಯ
ಲೆನಿಸಿ
ನೆರೆವಬಲೆಯರು ಬೇಟದೊಳಂ ರೇಚಿಯೊಳಿಂದಡೀ ಸೊಬಗನೇವಣ್ಣಿಪುದೋ
|| ೧೯ ||

---

೧. ಗ. ವ್ರತಿಗಿ ೨. ಗ. ಪಾಡಿಸುವರೆಲ್ಲರುಂ ತಪ್ಪದವರೆಲ್ಲ ಪೊಲ್ತಪರೆ|
ಕಾಮಸಂನಿಭ ರೇಚ ನೃಪನಂತೆ ಗಣಿಕೆಯರ್ಪಲರುಂ ಕೂರ್ತು ಬಂದು. ಕ. ಪ್ರತಿ
ಯಲ್ಲಿ 'ಕಾಮಸಂನಿಭ....' ಎಂಬ ಸಾಲು ಬಿಟ್ಟುಹೋಗಿದೆ. ೩. ಗ. ವಸ್ತ್ರಂಪಮಂ
ಪದಕಮಂ

|| ೮೦ ||

ಕಡುಪನು ಕಾಣ್ಕೆ ರೂಪು ನೆನೆತಪ್ಪೊಳಿದಾರಿಡರಂದೇ ಪಂಚನಂ[೧]
ಬದಿ(?)ಪನುಗಳ್ಕೆ ಪತ್ತುಗೆ ನಯುಂ ತೆರಪಾಂಕೆ ನಿಮಿಕ್ಕೆ ಬಂಧನಂ[೨] ||
ತೊಡಗುಳಿ ಸಕ್ಕುಮಪ್ಪ ಸರುಗೋಚರವಟ್ಟ ಬೇರೊಟ್ಟಿಲಿಂಕು ನೇಳ
ರ್ಪಗುನೆಲೆ ಚಿತ್ರನೆಂಬ ಭೃಗುವಿದ್ಯೆಯೊಳಾರ್ದೋರೆ ರೇಚ ಭೂಪನೊಳ್
|| ೨೦ ||

ಪಿರಿಯಕ್ಕರ ||

ದಾರೆಗತಿಲಯಪ್ಪೊಯ್ದು ಕಾಯಕ್ಷಂ ತಿತಿಕ್ಷೆ ಪಿತನೆರಿತುರ(ಗ?) ಸಮಾನಂ
ಭಾರಿಕೊಸಿ ಮುಷ್ಟಿಭಾಗಂ ವ್ಯಾಹಂ ನಿವರ್ತನೆ ಪದಂ ಯತಿ ಗಾತ್ರವೆ ವಿ
ಮಾರ್ಗಂ ||
ಹರಿ ಬಂಧನವುಂ ಭೌಮಂ ವೈಹಾಯಸಂ ವಯಸ ಯಂತ್ರಕ್ಷೇತ್ರವಹಳಿ
ಸತ್ಯಂ
ದಾರಿ ವೆಂಬ ಭೇದಂಗಳಿಂದಶ್ವಮನೇರಲು ರೇಚಿಗನೃಪತಿ ತಾನೆ ಬಲ್ಲಂ
|| ೨೧ ||

ಮತ್ತೇಭ ||

ವರ(?) ಜಾತ್ಯಶ್ವ ಸುವಂಶ ಲಕ್ಷಣ ಗುಣಂ ಸಹಜವಂ ಸಿಕ್ಷೆ ಬಂ-
ಧನಮಾವರ್ಣಂನತೆ ಪಾನಪಿಂಡಕ ಬಲವ್ರಾತಂ ಗುಣಂ ಕ್ಷೀಣವ- ||
ರ್ಧನೆ ಸಂದಷ್ಟಮದೋಷ ಜಾತಿ ಪಿಕಿತಾಧರಾರಾತಿ ವಂಶಿ ಕ್ಷಿಮತ್ತೇಭ ಭೇ-
ದನವೆಂಬೀ ಗಜವಿದ್ಯೆಯಂ ಗೋಚಸಿಳಿಯೆ ಳ್ಪಮಂತ ನಾರಾಯಣಂ||೨೨||

ಕಂದ ||

ಮದಮಾನಸಮೆರಕಂ ಜಾ-
ಣ್ಪದಿರೆಂಬುವನರಿದು ತನ್ನ ತೊಡೆಗಳ್ಗೆಡೆಗು ||
ನ್ಮದ ಕರಿಯುಂ ಬರ್ದಯುಮಂ
ಮುದದಿಂ ಶ್ರೀ ರೇಚ ನೃಪತಿ ಒಸಮಾಗಿಸುವಂ || ೨೩ ||

---

೧. ಗ. ತಪ್ಪೊರಿ ದಾರೆ (ಗ) ಡರಂಡೆ ಪಂಚನಂ ೨. ಗ. ಬಡಿಪೆಮುಗಲಕ್ಕೆ
೩. ಗ. ನಿಮಿಕ್ಕೆ ಬಂಧ.. ೪. ಗ. ಚರುಪಟ್ಟಿ ಬೆರೊಟ್ಟುದಿಂ. ಕ. | ನೆಡುನೆಲೆ
೫. ಗ. ದೋಷಭಾರವಿದಿತಾದ್ರಾರಾತಿ ಮತ್ತೇಭ ಭೇ-

॥ ಮತ್ತೇಭ ॥

ಗತಿಮಾರ್ಗಂ ಶ್ರುತಿದೇಸೆ ನುಣ್ಪು ಗಮಕಂ ಬಂಧಂ ಕ್ರಮಂ ಕೂಕುಳಂ
ಕೃತಿಯರ್ಥಂ ಲಯತಾಳ ಸೌಷ್ಟವಗುಣಂ ಬಣ್ಣಂ ಕ್ರಿಯಾಕಾರಕಂ ॥
ಯತಿತಾಳಂ ರಸಭಾವವಿಂಪಭಿನಯಂ ಪ್ರಾಣಂ ಪದಂ ಛಂದಮಾ-
ಣತಿ ಶಾರೀರಮೆಸಿಪ್ಪ ಗೀತದೆಡೆಯೊಳ್ ರೇಚಂ ಸರೋಜಾಸನಂ ॥ ೨೪ ॥

॥ ಕಂ ॥

ನರನಾಥಂ ರೇಚಂ ಶ್ರೀ-
ಸಿರುತಂ ತ್ರಿಸ್ಥಾನಶುದ್ಧಿ ಯಿಂತೀ ಬುಧರಂ ॥
ಪರನಂ ಪರುಮಂ ತಂನಯ
ಸರದಿಂ ಸೋಲಿಸಿದಸಿಂನಿವಚ್ಚರಿಯೊಳರೆ ॥ ೨೫ ॥

ತನಗಿಲ್ಲದ ಭಯಮಂ ಕೊ-
ಟ್ಟು ನಿರಂತರಮನ್ಯ ನೃಪರೊಳಿಲ್ಲದ ಭಯಮಂ ॥
ಘನ ಶೌರ್ಯ್ಯಮುಮಂಕೊಂಡಂ
ಮೊನೆಯೊಳು ರೇಚಿಗ ಮಹೀಶನೆನಲಚ್ಚರಿಯೆ ॥ ೨೬ ॥

ಇಮ್ಮಡಿ ಹರಸಾಹಸದಿಂ-
[೧]ದಿರ್ಮ್ಮಡಿ ದುಗ್ಧಾಬ್ಧಿಗಂಬರಾಪಗೆಗತ್ತಂ ॥
ನೂರ್ಮ್ಮಡಿ ಹಿಮಶಿಖರಿಗೆ ಸಾ-
ಸಿರ್ಮ್ಮಡಿ ಮಿಗಿಲಾಯ್ತು ರೇಚಿಗನ ವಿಶದಯಶಂ ॥ ೨೭ ॥

ಇದುವೆ ಗೋಮೂತ್ರಿಕಮುಂ ಮುರಜ ಬಂಧಮುಮಕ್ಕುಂ ॥

ಕಲಿಯೆ ಸೊಬಗನೆ ಕರಂ ನಿ-
ರ್ಮ್ಮಲನೆ ನಿರುತಂ ಪದನೆ ಶುಚಿಯೆ ದಾನಿಯೆ ರೇಚಂ[೨] ॥ ೨೮ ॥

---

೧. ಕ. ನೂರ್ಮ್ಮಡಿ ೨. ಈ ಕಂದದ ಎರಡು ಚರಣಗಳು ಮಾತ್ರ ಇವೆ.

ಆದಿಯಂಮಕಂ ||

[೧]ಭವನೆನಿಸಿದ ಮಹಿಮೆ ಭವೋ-
ದ್ಭವನೆನಿಸಿದ ಶಕ್ತಿ ನಾಕಲೋಕೇಶನೆನಿಸಿದ ಗಂಡುಮನೋ-
ಭವನೆನಿಸಿದ ಸೊಬಗು ರೇಚ ಭೂಪಾಲಕನ || ೨೯ ||

ಎನೆ ನೆಗಳ್ದ ರೇಚ ಭೂಪನ
ಮನೋಜ್ಞ ಲಾವಣ್ಯ ರೂಪು ಲಕ್ಷಣಯುತಿ ಮಾ-||
ನಿಸಿ ನುಡಿಗುಂ ನೃಪನೊಳ್ ಮಿಂ-
ಚಿನ ಗೊಂಚಲಿವೆನಿಸಿ ಪೊಳೆಯೆ ದಶನದ್ಯುತಿಗಳ್ || ೩೦ ||

ಮೃದುಮಧುರ ಗಭೀರತರಂ
ವಿದಿತಂ ಲಲಿತಂ ವಿಮುಗ್ಧಮತಿ ಚಾತುರ್ಯ್ಯಂ ||
ಸದಯಂ ಧರ್ಮ್ಯಂ ವಿನಯಾ-
ಸ್ಪದಮಿಂತಿದೆ ನೀತಿಯೆಂಬಿನಂ ಸತಿನುಡಿದಳ್ || ೩೧ ||

ಮೃಗಮದಕರ್ಪೂರಯುತಂ
ಮಘಮಘಿಪ ಕದಂಬ ದಂಬುಲಂ ಕಂಪಂ ನೆ- ||
ಟ್ಟಗೆ ಮುಖ ಪದ್ಮದ ಗಂಧಂ
ಮಿಗೆ ಪಂಕಜವಕ್ತ್ರೆ ನಯದೆ ನುಡಿಗುಂ ಪ್ರಿಯನೊಳ್[೨]||೩೨||

ಕಂತಳೆ ||

ಕೇಳ್ದು ಸೋಲದರೊಳರೆ ।
ಕಾದಿ ಸೋಲದರೊಳರೆ ।
ಬಾದು ಗೈಯದರೊಳರೆ ।
ಮೇದಿನೀಪತಿ ನಿಮಗೆ || ೩೩ ||

---

೧. ಈ ಕಂದದಲ್ಲಿ ಮೂರೇ ಚರಣಗಳು ಕೊಡಲ್ಪಟ್ಟಿವೆ. ಅದರ ನಾಲ್ಕು ಚರಣಗಳು ಹೀಗೆ ಇರಬಹುದು:—

ಭವನೆನಿಸಿದ ಮಹಿಮೆ ಭವೋ-
ದ್ಭವನೆನಿಸಿದ ಶಕ್ತಿ ನಾಕಲೋಕೇಶ ಸಂ ||
ಭವನೆನಿಸಿದ ಗಂಡುಮನೋ-
ಭವನೆನಿಸಿದ ಸೊಬಗು ರೇಚ ಭೂಪಾಲಕನ ||

೨. ಗ. ನೃಪನೊಳ್

ಪಿರಿಯಕ್ಕರ ||

ರೂಪು ಸೌಭಾಗ್ಯಂ ಕುಲಮಭಿಮಾನ ಮಣ್ಮಾಳುಗುದಿಶವಾಭರಣಂ ದಾನಂ|
ಕ್ಷ್ಮಾಪಗುಣಮಿಂತಿನಿತುಂ ರೇಚಿಗ ಮಹೀಶ ನಿನಗೆಂದುಂ ಸಹಜಂಗ
ಳಪ್ಪುದರಿಂ ||
ಭೂಪ ನಿನಗುಳ್ಳ ಗುಣಮಿವೆಲ್ಲವಗ್ಗೆಲ್ಲಂ ಸ್ತ್ರೀಯರನೊಲಿಸುವ ಭೇದಂಗಳಂ|
ಸೋಪದೇಶವೆಂಬಂತಿರೆ ಬೆಸಸಿವೆಂದು ಸತಿಯೆನೆ ಪೇಳಲುದ್ಯುಕ್ತ
ನಾದಂ || ೩೪ ||

ಜಗದ ಕಂಟಕರೆಲ್ಲರುಮಂ ಕೊಂದಿಕ್ಕಿ ನಿಷ್ಕಂಟಕಂ ಮಾಡಿ ಮತ್ತಮಿಾಗಳು|
ಜಗದೊಳೆಲ್ಲಂ ಗೈವಂತಾಶ್ರಮಂ ಪೂಜ್ಯಮದು ಕೂರ್ಮೆಯಿಲ್ಲದ ಪೆಂಡಿರಿಂ||
ಜಗದ ಕರ್ಮ್ಮಂಗಳುಂ ಕೆಟ್ಟಪ್ಪವು ಧರ್ಮ ಕರ್ಮಂಗಳು ಸತಿಯರಿಂದಂ |
ಜಗಕ್ಕೆ ನೆಗಳ್ಗಂ ನೀನದರಿಂದಂ ರೇಚಮಹೀಶ ನೀ ಜಗಕೆಲ್ಲಂ ಸ್ಮರ
ತತ್ವಮಂ ಬೆಸಸ || ೩೫ ||

|| ಕಂ ||

ಎಂದು ಸತಿ ನುಡಿಯೆ ಪರಮಾ |
ನಂದದಿ ರೇಚಿಗ ಮಹೀಶನಾಗಳು ಸಂಪೂ ||
ರ್ಣೇಂದುಮುಖಿಗರುಪಿದಂ ನಯ |
ದಿಂದ ಮುನಿಮತಮನವನಿಗೆಲ್ಲಂ ಹಿತಮಂ || ೩೬ ||

ಉಜ್ವಳ ||

ಮದನ ದರ್ಪಹರಂ ವರ ಕೈಲಾಸಾದ್ರಿಯೊಳದ್ರಿತನೂಜೆಗಾ |
ಮದನತತ್ವಮನಿಂತಿರೆ ಪೇಳ್ದಂ ರೇಚಮಹೀಶನುಮಂತೆ ನಿರ್ಮ ||
ಲದಸಮುಯಗುಣಂ ನಯದಿಂದಂ ಸ್ವಾಮಿಯ ಛಂದವೆ ಛಂದವೆಂ |
ಬುದನೆ ಭಾವಿಸಿ ಕಾಂತೆಗೆ ಪೇಳ್ದಂ ಮಚ್ಚಿ ಮನೋಭವ ತತ್ವಮಂ || ೩೭ ||

ಪೃಥ್ವಿ ||

ಇದಂ ಗಿರಿಸುತೇಶನುಂ ನೆಗಳ್ದ ರೇಚನುಂ ಕೂರ್ಮೆಯಿಂ |
ದುದಯಿಸಿದುದನಾತ್ಮ ವಲ್ಲಭೆಯರ್ಗೆಂದಡನ್ಯರ್ಮನೋ ॥
ಮುದಂ ಬೆರಸು ಕಾಂತೆಯರ್ಗರಿಯೆ ಪೇಳಲಾಗದಂತೆ ಸ್ವಾಂತ |
ನದೇವ ಚರಿತಂ ತದೇವಮರಿದೆನಿಸಿ ವಾಕ್ಯಮುಂ ಕೇಳಿರೆ || ೩೮ ||

|| ಕಂದ ||

[1]ಅಗಣಿತ ಗುಣಿ ರೇಚನೃಪಂ |
ಮೃಗ ನಯನೆಗೆ ಪೇಳ್ದ ಕಾಮತತ್ವವನಿಂಪಾ ॥
ವಗಮೊದವೆ ಪಲವು ಛಂದದೊ |
ಳೊಗೆದಂಬೋದಾದ್ಯ ಚಂದ್ರನಭಿವರ್ಣಿಸಿದಂ || ೩೯ ||

ಸಕಳ ಕಳಾಗಮ ಕೋವಿದ |
ನಕಳಂಕಚರಿತ್ರನುದ್ಧಗುಣಗಣ ಮಣಿ ವಿ ॥
ಪ್ರಕುಲಲಲಾಮಂ ಲೋಕ |
ಪ್ರಕಟಿತ ಶ್ರುತಕೀರ್ತಿನೆಗಳ್ದ ಚಂದ್ರಕವೀಂದ್ರ || ೪೦ ||

ಇದು ಪಣವ ಬಂಧಮುಂ ಗೋಮೂತ್ರಿಕೆಯುಮಕ್ಕುಂ||

ಅನುಷ್ಟುಪ್ ||

ಆದಿ ಚೈತ್ರಕರಂ ಧೀರಂ | ರಾಜಿತಂ ಚಂದ್ರನೂರ್ಜಿತಂ ॥
ವಾಜಿ ಗೋತ್ರಂ ಸ್ಥಿರಂ ಧೀರಂ | ಪೂಜಿತಂ ಚಂದ್ರನೂರ್ಜಿತಂ || ೪೧ ||

---

೧. ಕರ್ಣಾಟಕ ಕವಿಚರಿತೆ, I, ಪು.೯೧ರಲ್ಲಿ ಉದ್ಧೃತವಾದ ಪದ್ಯಗಳಲ್ಲಿ ಪಾಠಾಂತರಗಳು ಕಂಡುಬರುತ್ತವೆ. ಅಲ್ಲಿ ಈ ಪದ್ಯದ ಪಾಠಾಂತರಗಳು ಹೀಗಿವೆ :-

ಅಗಣಿತ ಗುಣ ಮಾಚಿ ನೃಪಂ |
. . . . . . . . . . . . . . .
. . . . . . . . . . . . . . .
ಳೊಗೆದಂಭೋಜಾಸ್ಯಚಂದ್ರನಭಿವರ್ಣಿಸಿದಂ ||

ಅರ್ಧಪಾದಗತ ಪ್ರತ್ಯಾಗತ ವಿಷಮಚಕ್ರಶ್ಲೋಕ :—

ಸಾಹಸಾ ಮದಯಾಹಾಸ । ಸಹಾಯಾದರಿ ಕೋಪರಿ ॥
ವಿಕತೋರಯಸೋಹೇಮ । ಮಹೇಸೋಮ ಯಗಾಕಸಂ[೧] ॥ ೪೨ ॥

ಇದುವೆ ಮುರುಜ ಫಣ ಬಂಧಮುಂ ಗೋಮೂತ್ರಿಕೆ ಮೊದಲಾದ ಪಲವುಂ ತೆರದ ಬಂಧಮುಂ ಜತ್ತಾರಟ್ಟಮೆಂಬೆರಡು ವೃತ್ತಮುಕ್ಕುಂ ॥

[೨] ಕವಿರಾಜ ಸಮಾನಂ ತಾಂ । ಕವಿರಾಜ ಸಮಾನಂ ।

ವಿರಾಜಿತ ಸಾಹಸಂ । ಕವಿರಾಜ ಸಮಾನಂ ॥ ೪೩ ॥
ಆದ್ಯಂತ ಪ್ರಾಸ ಯಮಕಮುಂ ಜತ್ತರಟ್ಟೆಯುಮೆಂಬುದಕ್ಕುಂ ॥

ಪೂಜಿತ ವಿಬುಧ ಸಮಾಜಂ ।
ಯೋಜಿತ ಸಮವಿದ್ಯನಮಲಗುಣಕವಿರಾಜಂ ॥
ರಾಜಿತ ರೂಪ ಮನೋಜಂ ।
ವಾಜಿತಮೋರಹಿತ ಕಂಬುಜ ಲತಾಂಬುಜಂ[೩] ॥ ೪೪ ॥

ಮತ್ತೇಭ ॥

ನೃತ ವಾಕ್ಯಾಂಬುಧಿ ಶೌರ್ಯ ಸದ್ಗುಣಿ ಮಹಾತೇಜಂ ಮಹಾತೇಜನೂ ।
ರ್ಜಿತ ವಿದ್ಯಾದಯಿತಂ ಸುರಂ ಜಿತಧರಾಧೀಶಂ ಧರಾಧೀಶಜಾ ॥
ಪತಿ ಪಾದಾಂಬುರುಹಾದಿ ಪೂರ್ತ ಸುಮನೋಜಾತಂ ಮನೋಜಾತನೆಂ ।
[೪]ದೊಲವಿಂದಂದರೆ ಬಂದು ದೇಶ ಶರದೋಪಶ್ಚಂದ್ರನಂ ಚಂದ್ರನಂ ॥ ೪೫ ॥

---

೧ ಗ. ಮಹಿಸೋ ಯಮಸಾಹಸಂ ॥

೨ ಗ. ಕವಿರಾಜ ಸಮಾನಮ್ರ । ಕವಿರಾಜ ಸಮಾನಸಂ ॥
ಕವಿರಾಜ ಸಮಾನಂ ತಾಂ । ಕವಿರಾಜ ಸಮಾನಕಂ ॥

೩ ಗ. ವಾಜಿತಮೋರಹಿತನಂಬುಜ . . . ಜಂ ॥

೪ ಇಲ್ಲಿ ಪ್ರಾಸ ತಪ್ಪುತ್ತದೆ.

ಅಸತೀ ಸಂಕುಲ ದೂರನಂ ಮನುಮುನೀಂದ್ರಾಚಾರನಂ ಶ್ರೀವಧೂ |
ಲಸಿತೋರಸ್ಥಳನಂ ವಿಶುದ್ಧ ಕುಲನಂ ದಿಕ್ಕಾಮಿನೀಗೇಯವಾ ॥
ನಸಮುದ್ಭಾಸಿತ ವರ್ಣನಂ ಬಹುಕಲಾ ಸಂಪೂರ್ಣನಂ ಧಾತ್ರಿ ಬ |
ಣ್ಣಿಸುಗುಂ ಚಂದ್ರನನರ್ಥಿಕೀರ ಪರಪುಷ್ಟಾನಂದಮಾಕಂದನಂ || ೪೬ ||

ಚಂಪಕ ||
ಪರಹಿತನೆಂಬ ಸತ್ಯ ನಿಧಿಯೆಂಬ ಮಹಾಕವಿಯೆಂಬ ದೀನ ಭಾ |
ಸುರ ಸುರ ಭೂಜನೆಂಬ ಗುಣಿಯೆಂಬ ಗುಣಾನ್ವಿತನೆಂಬ ಲೋಕದೊಳ್ ॥
ಪರಹಿತನೆಂಬ ಸತ್ಯನಿಧಿಯೆಂಬ ಮಹಾಕವಿಯೆಂಬ ದೀನ ಭಾ |
ಸುರಸುರ ಭೂಜನೆಂಬ ಗುಣಿಯೆಂಬ ಪೆಜರ್ನರರಾರ್ ಧರಿತ್ರಿಯೊಳ್ ॥೪೭॥

ಶ್ಲೇಷೆಯು ಕಂದ ||
ವೃತಗೋಮಂ ಸಕಳಕಳಾ |
ನ್ವಿತನಮೃತಮಯಂ ವಿಶುದ್ಧ ವೃದ್ಧಂ ಪರಿವೇ ॥
ಷ್ಟಿತ ಸನ್ನಿವಹಂ ಕುವಳಯ |
ಹಿತನೆನೆ ಸಂಪೂರ್ಣ ಚಂದ್ರನೊಳ್ದೊರೆ ಚಂದ್ರಂ ॥ ೪೮ ॥

ನೀವೊಸೆದಿನಿಸಂ ವಿಬುಧ |
ರ್ಗೀವಿಸಿ ಷೋಡಶ ಕಳೆಗೆ ಕುಂದುವಾ ಚಂದ್ರಂ ॥
ನೀವೆನಿಸಿದನೊನಾ ಪಡಿಮಿಗಿಲೆನೆ |
ಮಿಸುಪ ಚತುಷ್ಷಷ್ಟಿ ಕಳೆಗಳಿಂದೀ ಚಂದ್ರಂ [೧] || ೪೯ ||

೧ ಇಲ್ಲಿ ಪ್ರಾಸ ತಪ್ಪಿದೆ. ಗ. ಈ ಪದ್ಯವು ಹೀಗಿದೆ :–
ಪೊಸೆದಿನಿಸಂ ವಿಬುಧರ್ಗೀ |
ವಿಸೆ ಷೋಡಶಕಳೆಗೆ ಕುಂದುವಾ ಚಂದ್ರಂ ನೀನೆ ॥
ನೆಸಿದನೊ ನಾಲ್ವಡಿ ಮಿಗಿಲೆನೆ |
ಮಿಸುಪಂ ಚತುಷ್ಷಷ್ಟಿ ಕಳೆಗಳಿಂದೀ ಚಂದ್ರಂ ॥

ಮಹಾಸ್ರಗ್ಧರೆ ||
ಶಿವ ಶೀಲಂ ಪುಣ್ಯಾ ಶೀಲಂ ವಿಬುಧ ವಿಬುಧ ಶಾಲಂ ಗುಣಾನೀಕ ಶಾಳಂ |
ಸುವಿನೀತಂ ಬಂಧು ನೀತಂ ನಿಕ್ಕತ ಸುಕೃತ [೧] ಜಾತಂ ಸುವಿಸ್ತಾರಿ ಜಾತಂ||
ಕವಿಭಾವಂ ಸುಪ್ರಭಾವಂ ವಿಶದ ವಿಶದ ಭಾವಂ ಮಹಾಭಾವ ಭಾವಂ |
ಭವ ತೇಜಂ ಚಂದ್ರರಾಜಂ ಕರಣಕರಣ ರಾಜಂ ದ್ವಿಜಾಂಬೋಧಿ
ರಾಜಂ || ೫೦ ||

ಸಕಲ ವ್ಯಾಕರಣಾರ್ಥ ಶಾಸ್ತ್ರ ಗಣಿತಾಲಂಕಾರ ಸತ್ಕಾವ್ಯ ನಾ- |
ಟಕ ವಾತ್ಸ್ಯಾಯನ ನೃತ್ತಗೀತ ಹಯ ಶಾಸ್ತ್ರಾದ್ವೈತ ಗಾಂಧರ್ವ ತಾ ||
ರ್ಕಿಕವಿಂದ್ರಾಗಮ ವೈದ್ಯ ವಾದ್ಯ ಶಕುನೋದ್ಯದ್ ಹೃದ್ಯ ವಿದ್ಯಾಕದಂ |
ಬಕನುಂ ಚಂದ್ರ ಕವೀಂದ್ರನೋರ್ವನೆ ವಲಂ ಬಲ್ಲಂ ಪೆಱರ್ಬಲ್ಲರೇ || ೫೧ ||

ಅನಕಂ ಕುಂಡಲಿಭಾಭ್ರುವೀರ್ಯನತಿಲೌಲ್ಯಂ ಕೂಬರಂ ಕಾತರಂ |
ಕೆನಿಪಂ ಭದ್ರನ ರೂಪಿಕೇತು ಕುವಿಟಂ ವಾತ್ಸ್ಯಾಯನಂ ಗಾಣಿಕಾ || [೨]
ತನಯಂ ನಿರ್ದಯನಲ್ಪ ವೀರ್ಯನೆನಿಪಂ ಚಾರಾಯಣಂ ಜತ್ತಡಂ | [೩]
ತನು ಹೀನಂ ದೊರೆಯಿಲ್ಲ[೪]ದಿಂತಿನಿಬರುಂ ಪ್ರತ್ಯಕ್ಷ ಕಂದರ್ಪನೊಳ್|| ೫೨ ||

ಕಂದ ||
ಎನೆ ನೆಗಳ್ದ ಚಂದ್ರನಬ್ಜಾ |
ನನಚಂದ್ರಂ ಶ್ವೇತಕೇತು ಜಿತ್ತಾಕ[೫]ವಾತ್ಸ್ಯಾ ||
ಯನ ಪಾಂಚಾಳಾದಿ ಮಹಾ |
ಮುನಿಮತ ಮಿಗೆ[೬] ಪೇಳ್ದನೆಸೆಯೆ ಪೊಸ ಕನ್ನಡದಿಂ || ೫೩ ||

೧ ಕ. ಕ. I ಪುಟ ೯೧. ಸುಕೃತ ಸುಕೃತ ಜಾತಂ
೨ ಕ. ಕ. I ಪು. ೯೧. ಗೋಣಿಕಾ
೩ ಕ. ಕ. I ಪು. ೯೧. ಜತ್ತಕಂ
೪ ಸದರ:– ದೊರೆಯೊಲ್ಲರಿಂತಿನಿಬರುಂ
೫ ಸದರ:– “ ಜತ್ತಕ ”
೬ ಸದರ:– ಫುನೆ

ನೆರೆಯೆ ಮುನ್ನಿನ ತತ್ವಮನಾರುಂ ಮುನ್ನಿನವರ್ವಿದಿತಾರ್ಥವಾ |
[೧]ಗರುಪಿಲೊಲ್ಲದಣಂ ಪಲವ್ರೋದಂ ಮಾಡಿ ಸಮಂತೊಗೆದೆಂದವಾ ||
ರ[೨]ವರೆಂದು ಧರಾತಳಕೆಲ್ಲಂ ಕಾಮಕಳಾಗಮವೆಲ್ಲಮಂ |
ಕಿರಿದರಿಂದರಿವಂತಿರೆ ಪೇಳ್ದಂ ಶ್ರೀ ಕವಿತಾಮಹಿಮಾರ್ಣವಂ || ೫೪ ||

ಕಂದ ||

ಅನುಭವಿಸಿದಂಗಜಾಗಮ |
ಘುನೆ ಮಾಡಿ ಪಲರ್ಗೆ ತಾನು ಗತಿಕಾಲೋಕ ||
ಯೆನಿಪಂತೆ ಮುನ್ನ ಪೇಳ್ದುದ |
ನನುಭವಣೆಗವಾಗಮಕ್ಕಮುಳವಡೆ ಪೇಳ್ವೆಂ || ೫೫ ||

ಛಂದದಳಂಕಾರಂ ಕರ |
ವೊಂದಿ ಮನೋಜಾಗಮೋಕ್ತಮಂ ಲೌಕಿಕಮಂ ||
ಸಂಧಿಸಿ ನೀತಿಗೊಡಂಬಡು |
ವಂದದಿನಾರ್ಪೇಳ್ವರಿಂತು ಚಂದ್ರನ ತೆರದಿಂ || ೫೬ ||

ಅಧರೀಕೃತಿ ವಾತ್ಸ್ಯಾಯನ |
ನಧಿಗತ ಕವಿಮಾರ್ಗನಖಿಳ ನಾನಾಛಂದ ||
ಕ್ಕಧಿಕೃತಮಿದೆಂದು ಪೇಳ್ವುದು |
ಬುಧ ಮಂಡಳಿ ನಚ್ಚಿ ಮೆಚ್ಚಿ ಚಂದ್ರನ ಕೃತಿಯಂ || ೫೭ ||

ಕೃತಿಪತಿ ರೇಚನೃಪಂ[೩] ಕವಿ |
ಪತಿ ಚಂದ್ರಂ ತಿರ್ವಿಂತಿರೆ ದಂದಂ[೪] ಬ್ರಹ್ಮಂ ಸ ||
ತ್ಕೃತಿ ಮದನತಿಲಕಮಿದು ಕಾ |
ಮತತ್ವಮೆನೆ ನಚ್ಚಿ ಮಚ್ಚಿ ಪೊಗಳದರೊಳರೆ || ೫೮ ||

---

೧ ಗ. ಗರಿಪಲೊಲ್ಲದಣಂ

೩ ಕ. ಕ. I. ಪು. ೯೨ :– ಮಾಚನೃಪಂ

೪ ಗ. ತಿರ್ದಿ ಬರೆದವಂ. ಕವಿಚರಿತೆಯ ಪಾಠವೂ ಹೀಗೆ ಇದೆ.

ವಚನ || ಅದೆಂತೆಂದೊಡೆ

ಮೊದಲೊಳಬ್ಜಸಂಭವಂ ಧರ್ಮಾರ್ಥ ಕಾಮಶಾಸ್ತ್ರಗಳನೊಂದು ಲಕ್ಷಾಧ್ಯಾಯದೆ ಮಾಡಿದಲ್ಲಿ[೧] ತೆಗೆದುಕೊಂಡು ಚತುರ್ಮುಖ ಪುತ್ರಂ ಸ್ವಾಯಂಭುವೆಂಬ ಮನು ಧರ್ಮಮಂ ಪೇಳ್ದಂ ಬೃಹಸ್ಪತಿಯರ್ಥಶಾಸ್ತ್ರಮಂ ಪೇಳ್ದಂ | ಮಹಾದೇವರ ಗಣಂ ನಂದಿಕೇಶ್ವರಂ ಸಹಸ್ರಾಧ್ಯಾಯದಿಂ ಕಾಮಶಾಸ್ತ್ರಮಂ ಪೇಳ್ದಂ | ಕಿರಿದರೊಳುದ್ದಾಲಕ ಮುನಿಯ ಮಗಂ ನೂರಧ್ಯಾಯದಿಂ ಪೇಳ್ದನದಂ ಪಿರಿದೆಂದು ಬಭ್ರುವಿನ ಮಗಂ ಪಾಂಚಾಳಂ ನೂರೈವತ್ತಧ್ಯಾಯದಿಂ ಸಾಧಾರಣ ಸಂಪ್ರಯೋಗಿತ ನ್ಯಾಸಂಪ್ರಯುಕ್ತ ಭಾರ್ಯಾಧಿಕಾರಿಕ[೨] ಪಾರಾವಾರಿ ವೈಶೇಷಿತ ಜಪತೇಷವಿಕ[೩]ಮೆಂಬೇಳಧಿಕರಣಮಂ ಪೇಳ್ದಂ ಅಲ್ಲಿ ಆರನೆಯಧಿಕರಣಮಂ ವೈಶೇಷಿತ ಜಿತ್ತಕಂ ಪಾಟಳಿಪುತ್ರಂ ಗಣಿಕೆಯರ್ಗೆ[೪] ಪೇಳ್ದನಲ್ಲದೆ ಸಾಧಾರಣಮೆಂಬಧಿಕರಣಮಂ ಚಾರಾಯಣಂ ಸಾಂಪ್ರಯೋಗಿಕಮಂ ಸ್ವರ್ಣನಾಭಂ ಕನ್ಯಾರ ಸಂಪ್ರಯುಕ್ತಮಂ ಘೋಟ ಮುಖಂ ಭಾರ್ಯಾಧಿಕರಣಮಂಗೋನರ್ಶಿ[೫] ಪತಂಜಳಿಯುಂ ಪಾರದಾರಿಕಮಂ ಗಾಣಿಕಾ ಪುತ್ರಂ ಕೂಚಿ ಮಾರನುಪಷೇದಕಮಂ ಪೇಳ್ದಂನಿಂತು ಪಾಂಚಾಳನಿಂದಿತ್ತ ಪಲಬರುಮಾಚಾರ್ಯರಿಂದಂ ವೈರಚ್ಛಿನ್ನಮಾದ ಮದನಾಗಮಮನೊಂದು ಮಾಡಿ ವಾತ್ಸ್ಯಾಯನಂ ಮೂವತ್ತಾರಧ್ಯಾಯಮೇಳಧಿಕರಣದೊಳು ನಾಲ್ವತ್ತೆಂಟಕ್ಕರದ ಸಮಪಾದ ಸಹಸ್ರ ಗ್ರಂಥದಿಂ ಪೇಳ್ದನಲ್ಲಿ ಚಂದ್ರರಾಜನಾಗಮ ಲೌಕಿಕ ವಿರೋಧಮಂ ಕಳೆದು ಸಾರಾಂಶಮಂ ಕೊಂಡು ಪಲವು ಮತಂಗಳನೊಂದು ಮಾಡಿ, ಪದಿನೆಂಟಧಿಕರಣಂಗಳಿಂದಳಂಕಾರಂ ಕೃತಮಾಗೆ[೬] ನಾನಾಛಂದದಿನೈನೂರು ಗದ್ಯ ಪದ್ಯಂಗಳಿಂ ವಿಶ್ರುತಂ ಮಾಡಿ ಪೇಳ್ದನಲ್ಲಿ ಪುರುಷಂಗಾಯುಷ್ಯಂ ನೂರು ವರುಷಮಂ ತ್ರಿಭಾಗಂ ಮಾಡಿ ತ್ರಿವರ್ಗಮಂ ಸೇವಿ-

---

೧ ಗ. ಲಕ್ಷಾಧ್ಯಾಯುವ ಮಾಡಿದನಲ್ಲಿ

೨ ಗ. ಭಾರ್ಯಾವಿಕಾರಿಕ

೩ ಗ. ಜಪನೇಷದಿಕ

೪ ಗ. ಗಣುಕೆಯರ್ಗೆ

೫ ಗ. ಗೋನರ್ತ್ಥಿ

೬ ಕ. ಕ. I ಪು. ೯೧. ' ದಳಂಕಾರಾಲಂಕೃತಮಾಗೆ '

ಸುಗೆ ಬಾಲ್ಯದೊಳ್ವಿದ್ಯಾ ಭೂಮಿಯರ್ಥ ಮಿತ್ರರೆಂಬಿವನುಪಾರ್ಜಿಸಿ, ಬಳಿಯಂ ಜವ್ವನದೊಳು ಕಾಮಭೋಗಮನನುಭವಿಸಿ, ವಾರ್ಧಕದೊಳು ಧರ್ಮ ಮೋಕ್ಷಂಗಳಂ ಸೇವಿಸುವುದು ಆಯುರ್ಜ್ಞಾನಮರಿವಗಂಕುಮಲ್ಲದೆ ಮನುಷ್ಯರ್ಪರಿಮಿತಾಯುಗಳಪ್ಪುದರಿಂದ ಧರ್ಮಾರ್ಥ ಕಾಮಂಗಳ ನೊಡನೊಡನೆ ದೇಶಕಾಲ ಬಲೋಪಾಯದಿಂ ಸೇವಿಸುಗ, ಧರ್ಮಶಾಸ್ತ್ರ ಮಾರ್ಗದೊಳಂ ಧರ್ಮಜ್ಞರುಂ ಪೇಳ್ದಂಗದೊಳಂ ಧರ್ಮಂಗೆಯ್ಗೆ, ನೀತಿ ಶಾಸ್ತ್ರ ಮಾರ್ಗದೊಳಂ ವ್ಯವಹಾರ ಕುಶಲದೊಳೆ ಅರ್ಥೋಪಾರ್ಜನಂಗೆಯ್ಗೆ | ಪಂಚೇಂದ್ರಿಯಂಗಳಿಚ್ಛೆಯೊಳು ಮನಂಗೊಂಡು ನಡೆವುದು ಕಾಮಮಕ್ಕುಂ, ಅಲ್ಲಿ ಸ್ಪರುಶನ ವಿಶೇಷಂ ಪ್ರಧಾನ ಕಾಮುಮಕ್ಕುಮಾಕಾಮಂ ಶಾಸ್ತ್ರದೊಳಂ ನಾಗರಿಕ ಜನದೊಳಂ ಕಲ್ತು ನೆಗಳ್ವುದು | ಮತ್ತಂ | ಧರ್ಮಾರ್ಥಂಗಳಿಗೆ ಶಾಸ್ತ್ರಂ ಬಾರ್ತೆ | ಕಾಮಕ್ಕೆ ಶಾಸ್ತ್ರಂ ನಿಃಪ್ರಯೋಜನಮದೆಂತೆನೆ- ಪಿರಿಯ ಜ್ಞಾನಿಗಳಾವ ಶಾಸ್ತ್ರದಿಂ ನೆರೆದಪರ್ವೆಂಡೊಡವು | ಋತು ಕಾಲಾದಿಗಳು ಮೊರೆ | ಧರ್ಮಂಜಾತಿ ವಿಕಲ್ಪನೆಯೆಂಬಿವೆಲ್ಲ[೧] ಪುಣ್ಯಪಾಪಮೆಂಬುದನರಿವುದಲ್ಲವು ಗೋಧರ್ಮಂ ಮನುಷ್ಯ ಧರ್ಮಮುಮಾಗಲರಿಯದದರಿಂ ,ಕಾಮಕ್ಕೆ ಶಾಸ್ತ್ರಂ ಪ್ರಯೋಜನಮೆಂಬುದು ಪೂರ್ವಾಚಾರ್ಯ ಮತಮೆಂತಾದುದೆಂದರ್ಥಮುಂ ಶರೀರಮುಮನುಪಕ್ಷಯಂ ಮಾಡುವ ಸಂಶಯಮಂ ಮಾಡುವ ಧರ್ಮಮೆ ಬಾರ್ತೆ, ಸಂಶಯದಿಂ ನಾಳೆ ಬಪ್ಪ ಪೊನ್ನಿಂದಮಿಂದು ಬಪ್ಪ ಪಣಮೇ ಲೇಸು; ನಾಳೆ ತಿಂಬನ್ನದಿನಿಂದ[೨] ಮಿಂದು ತಿಂಬ ಲಾವಗೆ ಲೇಸೆಂಬ ಲೋಕದ ವಚನಂ ಪ್ರಮಾಣಮಾವಚನಮುಂ ಧರ್ಮಕುಪಮಾನಂ[೩] ಮಾಡಿ, ಶೂನ್ಯವಾದಿಯಾಗಿ ಧರ್ಮಮಂ ಸಂಶಯಂಗೆಯ್ವ ವೇದ[೪] ಯಜ್ಞ ಮಂತ್ರವಾದ ಜ್ಯೋತಿಜ್ಞಾನ ವಿಷಯಾದಿಗಳಿಂದುಣ್ಣಲ್ಪಟ್ಟುದದರಿಂ[೫] ಧರ್ಮಂ ನಿಶ್ಚಯಮುಂಟು ಬೀಜದುಪಕ್ಷಯಂ ಬಗೆದು ಬಿಕ್ಕೈವುದಂ[೬]

೧ ಗ. ಜಾತಿವಿಕಲ್ಪಮೆಂಬಿವೆಲ್ಲ

೨ ಗ. ನಾಳೆ ತಿಂಬ ನವಿಲಿನಿಂದ

೩ ಗ. ಧರ್ಮಕ್ಕೊಪ್ರಮಾನಂ

೪ ಗ. ಗೆಯ್ಯುವೇಡ

೫ ಗ. ವಿಷವಾದಗಳಿಂ ಗುಣಪಟ್ಟುದರಿಂ

೬ ಗ. ಬಿತ್ತುವುದಂ

ಮಾಣಲಾಗದು, ಶರೀರಾರ್ಥದುಪಕ್ಷಯುಂ ಬಗೆದು ಧರ್ಮವುಂ ಮಾಣ-
ಲಾಗದು| ಸರ್ವಥಾ ಧರ್ಮಂಗೆಯಿಮೆಂಬುದು ಚತುಸ್ಸಮವಾಕ್ಯ| ಅಂತಪ್ಪ
ದರ್ಥಕ್ಕೆ ಶಾಸ್ತ್ರಯುಕ್ತಂಗೆಯ್ಯಲು[೧], ಪೂರ್ವಕೃತ ಪುಣ್ಯದಿಂ[೨]ದೆಂತು
ಮಕ್ಕುಮಾಗದುದೆಂದು[೩]ಮಾಗದೆಂದು ನಿರುದ್ಯೋಗಿಯಾಗವೇಡ ಪುಷ್ಕಾ-
ಕಾರದಿಂ ಶಾಸ್ತ್ರಮಾರ್ಗದಿಂ ಪೂರ್ವಾಪರವರಿದುಚಿತಮಪ್ಪುದಂ ನೆಗಳೆ
ನಿಶ್ಚಯಮರ್ಥಮಕ್ಕುಂ ಅಲ್ಲಿಂ ಸಂಶಯ ಬೇಡೆಂಬ ಬೃಹಸ್ಪತಿಯ ವಾಕ್ಯ |
ಧರ್ಮಾರ್ಥಂಗಳಿಂಗೆ ಕಾಮಂ ಪ್ರತಿಕೂಲಮಾಕಾಮಮುಮಂ ನಿಲಿಸುವಡೆ[೪]
ಪಿರಿದುಂ ಪ್ರಮಾದಮಗ್ರಾಹ್ಯಮವಿಶ್ವಾಸಂ ಮತ್ತಮೊಳ್ಳಿತಪ್ಪುವೆಲ್ಲಮುಂ
ಕಾಮುಂ ಕೆಡಿಸುಗುಂ | ಕಾಮವಶರಾಗಿ ರಾವಣ, ದಂಡಕ, ಸುರೇಂದ್ರ,
ಕೀಚಕ ಪ್ರಭೃತಿಗಳನೇಕರು ನೀತಿಗೆಟ್ಟರು[೫] | ಅದರಿಂ ಕಾಮುಂ ಸೇವ್ಯ-
ಮಲ್ತು | ಆದೊಡಂ ದೋಷವಿರಹಿತ ಕಾಮುಂ ಸೇವಿಸುಗೆ | ಭೈಕ್ಷುಕಂಜಿ
ಅಟ್ಟುಂಬುದಂ ಮಾಣಬೇಡ[೬] ಪೆಣ್ಣಿಂಗಂಜಿ ಯುಟ್ಟುಸಿಕ್ಕವೆಡೆ[೭]ನಿರ್ವಾದ-
ಮಪ್ಪುದಂ ಮಾಡುವದಂತುಮಲ್ಲದೆಯುಂ

ಕಂ ||

ಒಂದಂ ತ್ರಿವರ್ಗದೊಳುವೆಸ |
ಸೊಂದಂ ಮತ್ತಿರಡು ಮುಳಿವು ವಪ್ಪಡೆ ಕೈ ಕೊ ||
ಳ್ಳೆಂದಾಚಾರ್ಯಂ ಮುನಿಯಂ |
ಸಂಧಿಸಿ ವರ್ಗತ್ರಯಾನ್ವಿತಂ ನೆಗಳ್ಗೆ ಬುಧಂ || ೫೯ ||

---

೧ ಗ. ಅಂತಪ್ಪದರ್ಥಕ್ಕೆ ಶಾಸ್ತ್ರಂ ಬಾರ್ತೆಯುಕ್ತಿ |
೨ ಗ. ಪುಣ್ಯದಿಂದಪ್ಪುದೆಂತುಮಕ್ಕು
೩ ಗ. ಮಾಗದುದೆಂತುಮಾಗದೆಂದು
೪ ಗ. ಸೇವಿಸುವೊಡೆ
೫ ಗ. ನೇಕರುಂ ಕೆಟ್ಟರು |
೬ ಕ. ಭೈಕ್ಷುಕಂಜರಿಟ್ಟುದೆಲ್ಲಮಂ ಮಾಣಬೇಡ
೭ ಗ. ದಲ್ಲಿ ಕೆಳಗಿನ ವಾಕ್ಯಗಳು ಇರುತ್ತವೆ :—
ಪೆಣ್ಣಿಂಗಂಜಿ ಯುಟ್ಟುಪಸಿಕ್ಕವೇಡ | ಆದರಿಂ ನಿರ್ದೋಷಮಪ್ಪ ಕಾಮಮುಂ
ಸೇವಿಸುಗೆ | ಮತ್ತಂ ಧರ್ಮಾರ್ಥಕಾಮದೊಳು ಸಂಶಯಮಪ್ಪುದಂ ನೆಗಳ-
ವೇಡ | ನಿರ್ವಾದಮಪ್ಪುದಂ

ದಿವಸ ದಿವಸಕ್ಕೆ ಶ್ರುತಿಮತಿ ೧ |
ನವರು ಧ್ವನಮಾಯು ರೂಪು ತೇಜಂ ಸತ್ವಂ ॥
ತವ್ರಗುಂ ನೆರೆತೆರೆ ರುಜೆಯಿಂ |
೨ಬಿವಕ್ಕುಮದರಿಂ ತ್ರಿವರ್ಗಪರನಕ್ಕೆ ಬುಧಂ || ೭೦ ||

ಪಿರಿಯಕ್ಕರ ||

ಕೆಲಬರ್ಕಗಮಾಗಮುಂ ಪ್ರಚ್ಛನ್ನಮದು ಸಂಭಾವಯೋಗ್ಯಮಲ್ಲದರಿಂದ-
ಮರ್ದವುದೆಂಬುದು |
ಲಲನಾ ಸಂಯೋಗಮದೇಂ(ದೇ)ಕಾಂತನಪ್ಪುದರಿಂದಂ ಸ್ಮರತಾಗಮುಂ
ರಹಸ್ಯಂ ||
ಜಲಜಭವನಃಮದೆಂಭತ್ತುನಾಲ್ಕು ಲಕ್ಷ ಯೋನಿ ಮುಖ ಜೀವದಲ್ಲಿ |
ಲಲನೆ ಮಾನುಷಯೋನಿ ದುರ್ಲಭಮಲ್ಲಿ ದುರ್ಲಭಂ ಧರ್ಮಾರ್ಥಕಾಮ
ವರ್ಗಂ || ೭೧ ||

ಅವರೊಳಗೆ ಧರ್ಮಮುಂ ದ್ರ |
ವ್ಯವುಮೆರಡುಂ ಹೇತುವಲ್ತೆ ಕಾಮಕ್ಕದರಿಂ ॥
ತ್ರಿವಿಧದೊಳಂ ಕಾಮಮೆ ಮು- |
ಖ್ಯವೆಂದು ಮುನಿಮುಖ್ಯರರಿಯದೇಂ ಮಾಡಿದರೆ || ೭೨ ||

ಕಾಮಾಂಧನಿಂತೆಂದನಲ್ತೆ-

|| ಶ್ಲೋಕ || ೩ಸವೇನ ವಿಷಯಾನ್ ಕಾಲೇ ಮುಕ್ತ್ವಾಂ ಚತ್ವಾರಿ ಕಾಮಸ್ತ್ರೀ|
ಸುಖಂ ಹಿ ಸ್ಥಲಮರ್ಥಸ್ಯಾತ್ತನಿರೋಧಿ ವೃಥಾಶ್ರಿಯಂ ||೭೩||

---

೧ ಗ. ಕೃತಿಮತಿ

೨ ಕ. ಬಸುರಕ್ತಮದರಿಂ

೩ ಈ ಶ್ಲೋಕವು ತಪ್ಪುಗಳಿಂದ ಕೂಡಿದೆ. ಗ. ಪ್ರತಿಯಲ್ಲಿ ಹೀಗೆ ಇದೆ :—
ಸೇವೇತ ವಿಷಯಾನ್ ಕಾಲೇ | ಮುಕ್ತ್ವಾಂ ಚತ್ವಾರಿ ತಾಮಸಿ |
ಸುಖಂ ಹಿ ಫಲಮರ್ಥಸ್ಯ ತಂ ನಿರೋಧಿ ವೃಥಾಶ್ರಿಯಂ ||

ಕಂದ ||

ವಿವಿಧ ಪ್ರಜಾಭಿವೃದ್ಧಿ |
ಪ್ರವರ್ಧಕಂ ಕಾಮಮದು[೧] ಕಾರಣದಿಂ ತ್ರೈ ||
ಭುವನಂ ಕಾಮಮಯಂ ನಿ- |
ಶ್ಚವಮದರಿಂ ತತ್ವಮೆಗ್ಗಳಂ ಪೆರತುಂಟೆ || ೬೪ ||

ಜಗತೀತಳದೊಳಪುತ್ರ |
ಸ್ಯಗತಿರ್ನಾಸ್ತಿಯುಮೆನಿಪ್ಪ ಮುನಿವಾಕ್ಯಂ ನೆ ||
ಟ್ಟಗೆ ಕಾಮ ಸುಖದಿನಲ್ಲದೆ |
ನೆಗಳ್ಗುಮೆ ಪೇಳ್ಮಾತಕುಂಭಘಟಕುಚಯುಗಳೆ || ೬೫ ||

ಸುರ ದನುಜ ಗರುಡ ಯಕ್ಷಾ- |
ಸುರ ಭೂತ ಪಿಶಾಚ ಸಿದ್ಧ ವಿದ್ಯಾಧರ ಕಿ- ||
ನ್ನರ ಪನ್ನಗ ಗಂಧರ್ವ- |
ರ್ಸುರತ ಸುಖಂ ಪರಮ ಸುಖಮಿದೆಂದೆರಗಿರ್ದರು || ೬೬ ||

ಪಿರಿಯಕ್ಕರ ||

ಪಂಚ ಬಾಣಂಗಳು ಪಂಚೇಂದ್ರಿಯಂಗಳು ಕರ್ಣನಾಸಿಕ ದೃಗು ಜಿಹ್ವೆ ತ್ವಚಂಗಳು |
ಪಂಚ ಬಾಣನೆ ಪರಮಾತ್ಮನೆಂತೆನೆ ಭೂಜಳಾನಳ ಮರುದ್ವ್ಯೋಮಮೆಂಬ||
ಪಂಚಭೂತಂ ಶಬ್ದ ಸ್ಪರ್ಶರೂಪುರಸ ಗಂಧ ವ್ಯಾಪಕಮಂತದು ಸೂಕ್ಷ್ಮ ರೂಪಕಂ |
[೨] ಪಂಚವಿಂಶತಿ ತತ್ವಮಿದೆ ಫಲಂ ಮೋಕ್ಷ ಸುಖಮಲ್ತೆ ಕಾಮಸುಖಂ || ೬೭ ||

---

೧ ಗ. ಕಾಮಮಾದ

೨ ಗ. ಪಂಚವಿಂಶದಾದಿ ತತ್ವಮಿದೆ

ವರಾಹಮಿಹಿರನುಮಿಂತೆಂದನಲ್ತೆ-

ವಸಂತತಿಲಕ ॥

ಆತ್ಮಾ ಸಹೈತಿ ಮನಸಾ ಮನ ಇಂದ್ರಿಯೇಣ ।
ಸ್ವಾರ್ಥೇನ ಚೇಂದ್ರಿಯಮಿತಿ ಕ್ರಮ ಏಷ ಶೀಘ್ರಃ ॥
ಯೋಗೋಽಯಮೇವ ಮನಸಃ ಕಿಮಗಮ್ಯಮಸ್ತಿ ।
ಯಸ್ಮಿನ್ ಮನೋವ್ರಜತಿ ತತ್ರಗತೋಽಯಮಾತ್ಮಾ ॥ ೬೮ ॥

ಚಂ ॥

ಪರಬಲಮಂಡಲಂ ಸ್ವಬಲ ಮಂಡಲ ಧರ್ಮ ವಿಚಾರ ಚಿಂತೆ ಸಂ ।
ವರಣೆ ಕುಲಕ್ರಮಾಚರಣೆ ಕಂಟಕ ಶೋಧನೆ ಧರ್ಮಪಾಲನಂ ॥
ಗುರುನಿಯಮಂ ನಿಯುಕ್ತ ನಿಯಮಂ ಮೊದಲಾಗಿರನೇಕ ದುಃಖಮುಂ ।
ನರಪತಿಗಳ್ಗೆ ಮುಕ್ಕುಮಿವು ತೃಷ್ಣೆಯಿನಪ್ಪನರಂಗೆ ಧಾತುಗಳ್ ॥ ೬೯ ॥

ಆದರಿಂ ಪಲರ್ಗೆ ಸುಸಾ ।
ರದ ದುಃಖಾನಳನನಾರಿಸಲ್ಕನುರಕ್ತಂ ॥
ಮದನೋತ್ಸಾಹಂ ಕಾರಣ ।
ಮದು ಕೂರ್ಮೆಯಿನಕ್ಕುಮದರ ಹದನಂ[1] ಪೇಳ್ವೆಂ ॥ ೭೦ ॥

ಅರ್ಧ ಜತ್ತರಟ್ಟ ॥

ಯತ್ನಂಗೆಯ್ಯದ ಮುನಿಪರ ।
ಪತ್ನಿಯರುಂ [2]ಕಾಮ ಕೃತಕ ಕಂದರ ಯತ್ನಂ ॥
ಯತ್ನಂಗೆಯ್ಯದ ವನಿತಾ ।
ರತ್ನಮುಮಾ ಕಾಮಕೃತದೆ ಕೇಡೊಡಲಿಸುಗುಂ[3] ॥ ೭೧ ॥

೧ ಗ. ತೆರನಂ
೨ ಗ. ಕಾಮಕೃತಕ [ರಾ]ಪರ ಯತ್ನಂ
೩ ಗ. ಕೇಡೊದವಿಸುಗುಂ

ಕೂರಲೆವೇಳ್ಪುದು ಸತಿಯರ್ |
ಕೂರದೊಡವರಿಂದ ವಸುಹರಂ ವಸುಹರಮಿ ॥
ನ್ನಾರ್ರೈವಡುಳಿದ ಸಾಹಸ ।
[1]ಯಾರಳವೊ ವಿಹಿತ ವಾಕ್ಯಮಂ ಕೇಳ್ದರಿಯಾ || ೭೨ ||

ಉಪಜಾತಿ

ಶ್ಲೋಕ ॥ ಶಸ್ತ್ರೇಣ ವೇಣೀವಿನಿಗೂಹಿತೇನ ವಿದೂರಥಂ ತನ್ಮಹಿಷೀ ಜ-
ಘಾನ ॥
ವಿಷಪ್ರದಿಗ್ಧೇನ ಚ ನೂಪುರೇಣ ದೇವೀ ವಿರಕ್ತಾ ಕಿಲ ಕಾಶಿ
ರಾಜಂ || ೭೩ ||

ಅಂತುಮಲ್ಲದೆಯುಂ

ಕಲ್ಪಲತೆ ॥

ಭಾವೆ ಕೊಂದು ಮಡಗಿರ್ಪವದುವಂ[2] |
ದೇವಿ ಮೂಣ್ಡಳು ದಳಭ್ರನಂ ಮಹಾ |
ದೇವಿಯಿಂ ಶಿಖಿಗತಾರ್ಯವಾದನಾ |
[3]ಭೂಮಿಪಾಲನಳಿದಂ ವಿನತೆಯಿಂ || ೭೪ ||

|| ಕಂದ ||

ಪಲತೆರದ ಶಸ್ತ್ರದಿಂದಂ ।
ಪಲತೆರದ ವಿಷಾನ್ನಪಾನ ಖಾನಾದಿಗಳಿಂ ॥
ಪಲತೆರದುಪಾಂಶು ವಧೆಯಿಂ |
ಪಲರುಂ ಸತ್ತರ್ವಿರಕ್ತ(ರು) ಲಲನಾಜನದಿಂ || ೭೫ ||

---

೧ ಗ. ಮಾರಳವೊ ಮಿಹಿರವಾಕ್ಯಮಂ ಕೇಳ್ದರಿಯಾ ॥
೨ ಗ. ಭಾವೆ ಕೊಂದು ಮಡಗಿಟ್ಟಳಿಂದುವಂ
೩ ಇಲ್ಲಿ ' ವ ' ಕಾರಕ್ಕೆ ಮಕಾರ ಪ್ರಾಸವಿಟ್ಟಿದೆ.

ನೀತಿವಾಕ್ಯಮಿಂತೆಂದುದಲ್ತೆ-

ಶ್ಲೋಕ ॥ ದುಷ್ಟಾ ಭಾರ್ಯಾ ಶಠಂ ಮಿತ್ರಂ । [೧]ಭೃತ್ಯಶ್ಚೋತ್ತರ-
ದಾಯಕಃ ।
ಸಸರ್ಪೇ ಚ ಗೃಹೇ ವಾಸೋ। ಮೃತ್ಯುರೇವ ನ ಸಂಶಯಃ॥೭೬॥

ಕವಯಃ ಕಿಂ ನ ಪಶ್ಯಂತಿ ಕಿಂ ನ ದೃಶ್ಯಂತಿ ಯೋಗಿನಃ[೨] ।
ಮದ್ಯಪಾಃ ಕಿಂ ನ ಜಲ್ಪಂತಿ ಕಿಂ ನ ಕುರ್ವಂತಿ ಯೋಷಿತಃ
॥ ೭೭ ॥

ಕಂದ ॥

ಇಂತುಂ[೩] ಮನುಮುನಿ ವಾಕ್ಯಮ ।
ಮಂತುರೆ[೪] ಕಾಂತೆಯರು ಗೆಯ್ದ ಪಾಪಂಗಳು ತ ॥
ತ್ಕಾಂತನನೆಯ್ದುಗುಮದರಿಂ ।
ಕಾಂತೆಯರನುವಶೆಯರಾಗದಂದು ವಿನಾಶಂ ॥ ೭೮ ॥

ಮನುವುಮಿಂತೆಂದನಲ್ತೆ-

ಶ್ಲೋಕ ॥ ಯಾನಿ ಯಾಮಿನಿ ಗೇಹಾನಿ ಸಂಪ್ರತ್ಯಂ ಪ್ರತಿಪೂಜಿತಂ ।
ತಾನಿ ಕೃತ್ಯಂ ಡಿತೋನಿವ[೫] ವಿನಶ್ಯಂತಿ ಸಮನ್ವಿತಂ ॥ ೭೯ ॥

ವಚನ ॥

ಅಂತು ದುಃಖಂಬಟ್ಟು ಬೈವ ಪೆಂಡತಿಯಿಂ ಕೇಡಕ್ಕುಮಲ್ಲದೆಯುಂ ಬೆಸನುಮಲ್ಲದೊಡಂ ಋತುಗಾಲದೊಳಂ ರತಿಗೆಯ್ಯಲೆ ವೇಳ್ಕುಂ ಸ್ಮೃತಿ-ಗಾರನು ಮಿಂಡಕ್ಕುಮಲ್ಲದೆಯುಮಿಂತೆಂದನಲ್ತೆ[೬]

---

೧ ಗ. ಭೃತ್ಯಸ್ಯಾಂತರದಾಯಕಃ । ಎಂದಿದೆ.

೨ ಗ. ಕಿಂ ನ ದೃಶ್ಯತಿ ಯೋಗಿನಾಂ । ಎಂದಿದೆ. ಕಿಂ ನ ಪಶ್ಯಂತಿ ಯೋಗಿನಃ ಎಂದಿರಬೇಕು.

೩ ಗ. ಉಂತುಂ

೪ ಗ. ದುಂತುರೆ

೫ ಗ. ಕೃತ್ಯಂ ಹಿತೋನಿವ. ಈ ಶ್ಲೋಕವು ಅಶುದ್ಧವಿದೆ.

೬ ಗ. ಸ್ಮೃತಿಗಾರನು ಮಿಂತೆಂದನಲ್ತೆ

ಶ್ಲೋಕ ॥ ⁽¹⁾ಬಹಿರ್ಲೋಮ್ನೇನ ಷಣ್ಮಾಸೆ ದ್ವೇಷಿತಃ ಕರಚರ್ಮಣಾ |
ರಾಗತಿಕ್ರಮ್ಯರಿಂ ಕ್ಷಾದೇದೇಹೀತ್ಯುಕ್ತ್ವಾ ವಿಶುಧ್ಯತಿ ॥ ೮೦ ॥

ಕಂದ ॥

ಏನಂ ಪೇಳ್ವುದೊ ಪಲವಂ |
ಮಾನಿನಿಗೆ ವಿರಾಗಮಾಗದಂತನುಭವಿಸು ॥
ತ್ತಾನಾರಿಯನೊಲ್ದೊಲಿಸುಗೆ |
ಮಾನ ಯಶೋಧರ್ಮ ವಂಶಮಂ ಬಯಸುವವಂ ॥ ೮೧ ॥

ರತಿಯು ಪದದಲ್ಲಿ ಗರ್ಭ |
ಸ್ಥಿತಿಯೊಳು ಶುಕ್ಲಂ ವಿಶೇಷಮಾದಡೆ ಪುರುಷಂ ॥
ಸತಿರಕ್ತಾಧಿಕದಿಂದಂ |
ಸತತಂ ಸಮನಾಗೆ ಷಂಡರಪ್ಪರ್ಮಕ್ಕಳ್ ॥ ೮೨ ॥

ಋತುವಿನ ರತಿಯೋಳ್ಪೆರರಂ |
ಸತಿ ಬಯಸಿದಡವಳು ಬಯಸಿದವನಂ ಪೋಲ್ವ ॥
ಸುತರರದರಿಂ ಸ್ತ್ರೀಗನುರ |
ಕ್ತತೆಯಂ ಮಾಡಲ್ಕೆ ಕಾಮತತ್ವವೆ ಮುಖ್ಯಂ ॥ ೮೩ ॥

ಬಲಗೆಲದೆಡೆಯೊಳು ಗರ್ಭಂ |
ನಿಲೆ ಪುರುಷಂ ವಾಮಭಾಗದಿಂ ಸ್ತ್ರೀಯೆರಡುಂ ॥
ಕೆಲದೊಳೆಮಳ್ಗಳು ನಡುವಣ |
ನೆಲೆಯಿಂದಂ ಷಂಡರಾಗಿ ಪುಟ್ಟುವರೆಂದುಂ ॥ ೮೪ ॥

⁽²⁾ಅನಿಲವುಪಪೈತ್ಯ ದೋಷದಿ |
ನನಿಲನ ಕುಂದಿಂದೆ ಪಂಗುಳಾಂಧಕೃಶಂ ವಾ-॥
ಮನ ಕುಬ್ಜ ಬಧಿರ ಮೂಕರು |
ಮನೇಕ ವಿಧದಂಗಹೀನರುಂ ಜನಿಯಿಸುವರ್ ॥ ೮೫ ॥

---

೧ ಇದು ಅಶುದ್ಧ ಬಿದ್ದಿದೆ.

೨ ಗ. ಅನಿಲ ಕಫ ಪೈತ್ಯ ದೋಷದಿ | ಎಂದು ಇರಬಹುದು.

ವನಿತಾ ಲಕ್ಷಣವೆನಿತೊಳ |
ವನಿತುಂ ಪುರುಷಂಗಮಕ್ಕು ಮಿದನರಿದು ಜಗ ॥
ಜ್ಜನಮೆನಿಪುನ್ನತಿಯುಂ ತಾಂ |
ತನಗಾಗಿಪೊದೊಲಿದು ನೆಗಳ್ಗೆ ವರ್ಗತ್ರಯದೋಳ್ ॥ ೮೬ ॥

ಗದ್ಯ ॥ ಇದು ಸಕಲ ವಿಬುಧ ಜನವಿನುತ ಕಾವ್ಯಾಲಂಕಾರ ನೀತಿ ನಿಬಂಧನಮುಂ, ಛಂದೋಮಹಾರ್ಣವಮುಂ, ಕವಿತಾ ಮಹಾರ್ಣವಂ, ಶ್ರೀ ಚಂದ್ರರಾಜ ವಿರಚಿತಮಪ್ಪ ಮದನತಿಲಕದೊಳ್ ಪೀಠಿಕಾವರ್ಣನಂ, ಪಿಂಡೋತ್ಪತ್ತಿ ವಿವರಣಂ ಪ್ರಥಮಾಧಿಕಾರಂ ಸಮಾಪ್ತಂ ಮಂಗಳಮಹಾ

ಶ್ರೀ ಶ್ರೀ ಶ್ರೀ

---

# ದ್ವಿತೀಯಾಧಿಕಾರಂ

ಮತ್ತೇಭ ॥

ತನು ಮಧ್ಯಂ ಭ್ರಮರಾಳಕಂ ಘಟಕುಚಂ ಬಿಂಬಾಧರಂ ಮೀನಲೋ |
ಚನವಬ್ಜಾನನವಬ್ಜಗಂಧಮಿಭಕುಂಭ ಶ್ರೋಣಿ ರಂಭೋರು ಕಂ- ॥
ತುನಿಷಂಗೋಪಮಜಂಘೆ ಪಿಪ್ಪಲದಳಾ ಸಾಭಾಸ ಗುಹ್ಯಂ ಪಿಕ |
ಧ್ವನಿ ವಜ್ರ ದ್ವಿಜಮಾಗೆ ಪದ್ಮಿನಿಯುವಳ್ಕುಂಭಪ್ರವಾಳಾಧರೇ ॥ ೧ ॥

ನಳಿತೋಳ್ಮೀಗೊಗೆದೊಪ್ಪಿ ತೋರ್ಪಜಘನಂ ಬಿಂಬಾಧರಂ ವಕ್ರಕುಂ |
ತಳವೊಂದಾಗಿರೆ ತಳ್ತ ಪುರ್ಪ ರತಿ ರಾಗಂ ಗೌರವರ್ಣಂ ಸಪಿಂ ॥
ಗಳ ನೇತ್ರಂ ಗುರು ಮಧ್ಯವಲ್ಪ ನಿಟಿಲಂ ರೋಮಾನ್ವಿತಂ ಜಂಘೆಗ |
ಳ್ತಿಳಜಾವೋದಮಿದಾಗೆ ಶಂಕಿನಿಯುವಳ್ಪಂಕೇಜ ಪತ್ರೇಕ್ಷಣೇ ॥ ೨ ॥

ತೊಡೆ ತೋಳಂಗುಲಿ ಕಂಧರಂ ದ್ವಿಜಮಿವೆತ್ತಂ ಕೋಮಲಂ ಭ್ರೂಕುಚಂ |
ಮಡಕಾಲ್ಕಣ್ಕಿಪಿ[೧]ಯೆಂಬವಲ್ಪವಧರಂ ಭಾಳಂ ಕಪೋಲಂ ಕಚಂ ॥
[೨] ಕಡುವೆಂದಿಂತಿವು ತೋರವರ್ಧರತಿ ತಾಣ್ಮಂ[೩] ಬುದ್ಧಿ ಪದ್ಮಾಸ್ಯವೊ |
ಳ್ಕುಡಿಗಳ್ಬಿಟ್ಟಿತುವಾಗೆ ಹಸ್ತಿನಿಗೆ ದಾನಾವೋದಮುಕ್ಕುಂ ಸತಿ ॥ ೩ ॥

ಅಳಕಂಗಳ್ನಯನಂಗಳಂಗುಲಿಚಯಂಗಳ್ಜಂಘೆಗಳ್ನಾಡೆ ಕೋ |
ಮಳಮಕ್ಕುಂ ಮೊಲೆ ಬತ್ತು ಕಂಗಳೆನಿತುಂ ತೆಳ್ಪಿಂದ ಕೌಂಕುಳ್ಕರಂ ॥
ಕುಳಿದಿರ್ಪಂ ಪೆರತೆಂಕ ವಂದಿ ವಸುರಾಗಿರ್ಪಂ ನಿತಂಬಂ ಮನಂ |
ಗೊಳಿಕುಂ ಬೆಟ್ಟಿತುವಾಗೆ ಚಿತ್ತಿನಿಗೆ ನಿಂಬಾವೋದಮಕ್ಕುಂ ಪ್ರಿಯೇ ॥ ೪ ॥

---

೧ ಗ. ಮಡಕಾಲ್ಕಣ್ಕವಿ

೨ ಗ. ನಡು

೩ ಗ ಲೌಲ್ಯಂ

ತ್ರೋಟಕ ॥
ಮಾನೋನ್ನತಮೊಲ್ಪೆಸೆ ಪದ್ಮಿನಿಯೋಳ್ |
ಮೀನಧ್ವಜರಾಗದೆ ಶಂಕಿನಿಯೋಳ್ ॥
ಪೀನಂ ಕಠಿನತ್ವದೆ ಹಸ್ತಿನಿಯೋಳ್ |
ನಾನಾರತಮೆಂದರಿ ಚಿತ್ತಿನಿಯೋಳ್ ॥ ೫ ॥

ಇಂತೀ ನಾಲ್ಕುಂ ಜಾತಿಯ |
ಕಾಂತೆಯರವಯವ ಗುಣಂಗಳೊಂದೊಂದರೊಳ ॥
ತ್ಯಂತಂ ಕೂಡಿದೊಡರಿನೀಂ |
ಭ್ರಾಂತೇಂ ಸಂಕೀರ್ಣ ಜಾತಿಯೆಂದಾ ವಧುವಂ ॥ ೬ ॥

ಗದ್ಯ :— ಇದು ಚಂದ್ರರಾಜವಿರಚಿತಮಪ್ಪ ಮದನತಿಲಕದೊಳು ಜಾತಿ ವಿವರಣಂ ದ್ವಿತೀಯಾಧಿಕಾರಂ ಸಮಾಪ್ತಂ

ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ

# ತೃತೀಯಾಧಿಕಾರಂ[೧]

ಸುರ ಮುನಿ ಯಕ್ಷ ರಾಕ್ಷಸ ಪಿಶಾಚ ಗಣಾಂಶಕ ಕಾಮಿನೀಜನಾಂ |
ತರದೊಳನೂನದಾನಮೃದುವಾಕ್ಯ ಮಹಾ ಮಹಿಮಾತಿ ವಕ್ತ್ರ ಸೌಂ ||
ದರ ತರ ಪುಷ್ಪ ವಸ್ತ್ರ ವರ ಭೂಷಣೆ ಸತ್ಯರತೇಚ್ಛೆ ಸದ್ಗುಣಾ |
ದರೆ ಪತಿ ಭಕ್ತೆಯಾಗೆ ದಿವಿಜಾಂಶಕೆ ಯೆಂದರಿ ನೀಂ ತಳೋದರಿ ॥ ೧ ॥

ವಿನಯಂಗುಂದದೆ ಪಾಪದತ್ತೆರಗದೊಳ್ಪಂ ತಾಳ್ದಿ ಪೆಂಪಿಂಗೆ ನೆ |
ಟ್ಟನೆ ತಾನಾಗರವಾಗಿ ದಾನಗುಣಮುಂ ಶೌಚತ್ವಮುಂ ದೇವತಾ ॥
ರ್ಚನಮುಂ ಸದ್ಗುರುಭಕ್ತಿ . . . . . . . . . . |
. . . . . . . . . . . ಕಂಗನೆಯುವಳ್ ನೀರೇಜ ಪತ್ರೇಕ್ಷಣೇ ೨॥

॥ ಕಂ ॥

ಶೃಂಗಾರಾನ್ವಿತೆ ಲುಬ್ಧೆ ಜೆ |
ಡಂಗನ . . . . . . . . . . ||
. . . . . . . . . . . ರಂ ಸೊಬ |
ಗಿಂಗಾಗರವಾದಡಂಗೆ ಯಕ್ಷಾಂಶಕೆಯಂ || ೩ ||

॥ ಮಲ್ಲಿಕಾಮಾಲೆ ॥

ಪ . . . . . . . . . . . ಕರಂ ಕೋಪ
ಮುಂ ಪುಸಿಯುಂ ವಿಡಂಬದ ಪಾರುಗೆಯ್ತನ
ಮುಗ್ರ ವಿದ್ರೂಪಮುಂ ಕ . . . . . . . . . . .
. . . . . . . . . . . ಕ್ರೂಪೆ ರಾಕ್ಷಸಾಂಶಕೆ ಯೆಂ
ದು ನೀನರಿ ಧೂರ್ತೆಯಂ || ೪ ||

---

೧. ಮೂರು ಮತ್ತು ನಾಲ್ಕನೆಯ ಅಧಿಕಾರಗಳು ಮೈಸೂರು ಪ್ರತಿಯಲ್ಲಿ (ಕ) ಇಲ್ಲ. ಮದ್ರಾಸ ಪ್ರತಿ (ಗ) ಯಿಂದ ಅವುಗಳನ್ನು ಇಲ್ಲಿ ಸೇರಿಸಿದೆ.

|| ಕಂ ||

ಪಿಸುನಿ . . . . . . . . . . . |
. . . . . . . . . . . ಚಾರಿಣಿ ಮದ್ಯಾ ||
ವಸಥೆ ಪಿಶಾಚಾಂಶಕೆ ಭಾ |
ವಿಸು ನೀನವಳಂ ಮನೋ. . . . . . . . . . . . . || ೫ ||

. . . . . . . . . . .
ನೆಗೆತದಂಶಕ ತತಿ ನುಡಿ ಕೂಡಿ ಬಂದಡೆ
ಸಂಕೀರ್ಣಾಂಶಕೆ ಯೊಂದರಿಯುಧನಾ . . . . . . . . . . .

ಗದ್ಯ ||

ಇದು ಚಂದ್ರರಾಜ ವಿರಚಿತವುಪ್ಪ ಮದನತಿಲ . . . . . . . . . . .
|| ೬ ||

ಮಂಗಳ ಮಹಾ ಶ್ರೀ ಶ್ರೀ

---

# ಚತುರ್ಥಾಧಿಕಾರಂ

॥ ಕಂ ॥

ಪಲವುಂ ದೇಶವಿಭಾ . . |
. . . . . . . . . . . ॥
ಲಲಿತಾಂಗಿಗರುಪಿದಂ ನಿ |
ಶ್ಚಲ ಮತಿ ಮದನಾಭಿರಾಮನುದ್ಧತ ಭೀನುಂ ॥

॥ಚಂ ॥

. . . . . . . . . . . ಗಿ ರೂಪಸಂ |
ಪದೆ ಕಡುಗಾಡಿ ಗಾರ್ತಿಗಡುವಂ ವೊರವಳ್ಸುರತಪ್ರವೀಣೆ ನಿ |
. . . . . . . . . . ಬರ್ದೆಯಾದೊಡಡಾ ॥
ಸುದತಿ ವಿದಗ್ಧೆ **ಕಂನಡಿತಿ** ಯೆಂದರಿಸೀಂ ತರಳಾಯತೇಕ್ಷಣೇ॥

. . . . . . . . . . . ದ್ದುಂಬರ್ದುಮಂ ತೋರ್ಪಗಾ |
ಡಿಯೊಳಾರ್ಗಂ ಮಿಗಿಲೆಂಬ ತಾಡನ ನಖಾಳಂ ಕೊಂ . . . .
. . . . . . . . . . . ಡಿದ ಲತಾ ಉರ್ವಿಯಂದನ್ಮ್ಕುಂ |
ದೆಯುವಳ್ಭಾವಿಸು ಲೋಲನೇತ್ರೆ ಪಿರಿದುಂ ಶ್ರುಂ . . . . . . ॥

. . . . . . . . . . .
ಂಸೆ ಸರ್ವಕ್ರಿಯಾ ಕುಶಲೆ ಕಷ್ಟರೂಪೆ
ಧೂರ್ತಕ್ರಿಯಾಢ್ಯೆ ಸುಡುರ್ದಲೆಯು . . . . . . . . . .
. . . . . . . . . . ದ್ಯ ಮಾಂಸಂಗಳನಾಗಳುಂ ಬಿಸುಡ
ಲಾರದವಳ್ ಸುರತಂ ನಿಷ್ಠುರಂಗಾ . . . . . . . . . . ॥

॥ ಕಂ ॥

ಸುರತ ಪ್ರಿಯೆ ಮಾಂಸಾಶನೆ ।
ಸರೋಷೆ ಮೃದು ಪೊಲ್ಲದೊ . . . . . . . . . . ॥
. . . . . . . . . . . ಬೋ ।
ದರೆಯಕ್ಕುಂ ಮ್ಲೇಂಚ್ಛ ವಿಷಯದಾಕೆ ವಿನೂತೆ ॥

ಶಾಪಾ . . . . . . . . . . ।
. . . . . . . . . . . ಮಂತ್ರ ತಂತ್ರಜ್ಞೆ ಕ ॥
ಳಾಪೆ ಪರಮಾತ್ಮ ಯೋಗಿನೆ ।
ತೇಪಿ ಹಿಮಾದ್ರಿ . . . . . . . . . . ॥

. . . . ದು ದೇಶದ ವರ್ಗಳೊ ।
ಳೊಂದೊಂದು ವಿಶೇಷದವರ್ಗಳನುರಕ್ತತೆಯಿಃ ॥
. . . . . . . . . . ॥
. . . . . . . . . . ಯೆಂದು ಬಗೆ ಮೃಗನಯನೇ ।

॥ ಗದ್ಯ ॥

ಇದು ಚಂದ್ರರಾಜ ವಿರಚಿತಮಪ್ಪ . . . . . . . . . ವರ್ಣನಂ ಚತು ರ್ಥಾಧಿಕಾರಂ ಮಂಗಳಮಹಾ ಶ್ರೀ ಶ್ರೀ

---

# ಪಂಚಮಾಧಿಕಾರಂ

ತ್ರಿಪದೋನ್ನತಿ ||

ಖ್ಯಾತಯುಶಂ ಕವಿಕುಲ ಮನೋ |
ಜಾತನಜೇಯಗುಣಂ ವಿತತಂ ||
೧ ಧಾತುಗಳುಂ ನುಡಿಗುಂ ಮನೋ |
ಜಾತನೇಂ ಸಮಂ ಬಂದಪನೆ || ೧ ||

ಮತ್ತೇಭ ||

ವಿನುತ ಶ್ಯಾಮೆ ಮೃದು ಚ್ಛವಿದ್ವಿಜನಖಾಕ್ಷಿ ದ್ವಂದ್ವೆ ಶೀತಾಂಗಿಮಾ |
ಸಿನಿ ಸಸ್ನಿಗ್ಧ ಭಗೋರು ಬಾಹುಯುಗೆ ಸೌಖ್ಯಾವಾಸೆ ಮಾಂ ಸೋಲ್ದ ಸು ||
ಸ್ತನಸನ್ಮಧ್ಯಮೆ ಕಾಮಿ ಬೆಳ್ಪಸದನಕ್ಕಾಶ ಕೇಶಿಮಂತಿನಿ² |
ಜನತಾ ಶ್ರೇಷ್ಠೆ ಬೃಹದ್ಗುಣಾಭಗೆ ³ ಖಫಾತ್ಮ ಸ್ತ್ರೀ ಮನೋವಲ್ಲಭೆ || ೨ ||

|| ಚಂ ||

ವಿನಯ ಮನಂದವಂ ಸಖಿಯರೊಳ್ಪೊಗಳ್ದಳ್ಕರನುಂಟುಮಾಡಿ ಕಾ |
ಮಿನಿಯ ಮುಖಾಬ್ಜಮಂ ನಯದಿ ನೋಡಿ ಕಡು ನಗೆಗೂಡಿ ಕೂರ್ಮೆಯಂ||
ಮನಮರಿದಿಚ್ಛೆಯಿಂ ಸಲಿಸಿ ಬಿಚ್ಚತದಿಂ ಸುರತಾನುರಾಗಮಂ |
ಜನಿಯಿಸಿ ಕೂಡೆಗೆಲ್ಗೆ ಚದುರಿಂ ಚದುರಂ ಖಫಧಾತುವಪ್ಪಳಂ || ೩ ||

---

೧ ಗ. ಧಾತುಗಳುಂ ನುಡಿಗುಂ ನಿಜ
ಕಾಂತೆಗೆ ನೀತಿವಿದಂ ಸತತಂ ಪ್ರಿಯಳೇ ||

ಕಂದ ||

ಪಲ ತೆರದಾಳಾಪದೊಳೇಂ | ಲಲನೆಯರಂ ಪ್ರಕೃತಿ ಭೇದದಿಂದನುಭವಿಪಂ ||
ಗಲರಂಬಿನಿಕ್ಷುಚಾಪದ | ಬಲದ ಮನೋಜಾತನೇಂ ಸಮಂ ಬಂದಪನೇ ||

ಮೇಲಿನ ತ್ರಿಪದೋನ್ನತಿಯ ನಾಲ್ಕನೆಯ ಚರಣವು ಈ ಕಂದದ ಕಡೆಯ ಪಾದದ ಭಾಗವಾಗಿದೆ. ಕ ಪ್ರತಿಯಲ್ಲಿ ಈ ಕಂದವಿಲ್ಲ.

೨ ಗ. ಸದನಕ್ಕಾಶಕ್ತೆ ಸೀಮಂತಿನೀ

೩ ಗ. ಬೃಹದ್ಗುಣೋಭಗೆ

|| ಕಂ ||

ಮಾಗಿಯ ದಿವಸಂ ಘನರತಿ |
ರಾಗವನುತ್ಸವದಿ ಮಾಡುಗೆಂದುಂ ಬೆಳಗ ||
ಪ್ಪಾಗಳು ಕೂಡದೆ ವಿನುತದಿ |
ಭೋಗಂಗಳ್ಗೆಳಸಿ ಕೂಡಿಗೆಲ್ಲಾ ವಧುವಂ || ೪ ||

|| ಚಂ ||

ಅತಿ ಪರುಷೋಕ್ತಿ ಕರ್ಕಶವರಾಂಗೆ ವಿಭಿನ್ನಕಚಾಗ್ರೆ ತನ್ವಿದು- |
ರ್ಮತಿ ಕಠಿಣಾಂಗೆ ಶೀಘ್ರಗತಿ ಸಂಚಳಗಾತ್ರೆ ಸಕೋಪೆ ಮೀನ ಸಂ ||
ಮ್ಮಿತ ವರ ನೇತ್ರಯುಗ್ಮೆ ಬಹುಭೋಜನೆ ನೀಲ ವಿಭೂಷಣೇಚ್ಛೆ ದು- |
ಸ್ಥಿತಿಯುತೆ ಮಾರುತ ಪ್ರಕೃತಿಯುಕ್ಕುಮವಳ್ತರಳಾಯತೇಕ್ಷಣೇ || ೫ ||

ಮತ್ತೇಭ ||

ರತಿಯಂ ನಿಷ್ಠುರದಿಂ ಪ್ರೊಣರ್ಚಿ ಕಡುಪಿಂದಂ ಬೈದು ವೈಯೆಲ್ಲಮಂ |
ಸತತಂ ಸಿಂಗರಿಸುತ್ತುಂ[೧] ಬುರಾಡಿ ಗಡುವಂ ನುಗ್ಗೊಪ್ಪಿನಂ ಪೊಯ್ದುತೀ ||
ವ್ರತೆಯಿಂ ಕಿಂಕಳೆ ಮಾಡಿ ನಿರ್ದಯತೆಯಿಂದಂ ಚುಂಬನಂಗೆಯ್ದು ಮಾ |
ರುತ ಧಾತುಗೆಟ್ಟಂತುಮ್ಮಳ[೨] ಬಸದೆ ಮಾಡಲ್ಬಲ್ಲವಂ ಬಲ್ಲವಂ || ೬ ||

|| ಕಂದ ||

ಕುಂತಳಮುಂ ತೆಗೆದೊತ್ತಿನಿ |
ರಂತರದೊಳೆರಡನೆಯ[೩] ಜಾವದೊಳ್ನೆರೆವುದು ನೀಂ ||
ಭ್ರಾಂತೇಂ ವೈಶಾಖದೊಳ |
ತ್ಯಂತಂ ಸುರತಮನೊಡರ್ಚಿ ಮಚ್ಚಿಸುವವಳಂ || ೭ ||

---

೧ ಗ. ಸಿಟ್ಟುಸಿರುಂ

೨ ಗ. ಧಾತುಸ್ಥಿತಿಯುಪ್ಪಳಂ

೩ ಗ. ರಂತರವೆರಡನೆಯ

ಮಹಾಸ್ರಗ್ಧರೆ ॥

ನಯನಂ ದಂತಂ ಮುಖಂ ತಾಮವು ಪಸುರೆಸಗುಂ ಪೂತಿ ಗಂಧಂ ಸಮಸ್ತಾ ।
ವಯಮಂ ಮೇಲ್ವಾಗಿ ಕೆಂಪುಂ ಮಿಸುಪಮನೊಳಕೊಂಡಿರ್ಕುವೋರಂತೆ ತಂಪಂ ॥
ಬಯಸುತ್ತಿರ್ಪರ್ಕಳು[೧] ನಿತಾಂತಂ ಮುನಿಸೊಸಗೆಗಳುಂ ತಕ್ಷಣಂಗಳ್ಸರಾಗೋ।
ದಯೆ ಲೌಲ್ಯ ಪ್ರಜ್ಞೆ ಪೈತ್ಯ ಪ್ರಕೃತಿಯ ವಧುವಾರಕ್ತ ಭೂಷೇಚ್ಛೆಯಕ್ಕುಂ ॥೮॥

ನಂದನಮುಂ ಲತಾಭವನಮುಂ ಕೊಳನುಂ ಪುಳಿನ ಸ್ಥಳಂಗಳುಂ ।
ಚಂದನಮುಂ ಹಿಮಾನಿಳನುಮಿಂದು [೨] ಕಾಂತಮುಂ ॥
ಕುಂದದ ತಾಣದೊಳ್ಚದುರ [೩] ಸುರತೋತ್ಸವ ಚುಂಬನ ಭೂಷಣಂಗಳಂ ।
ಸಂಧಿಸಿ ಗೆಲ್ಗೆ ಪೈತ್ಯದವಳಂ ನಯದಿಂ ತರಳಾಯತೇಕ್ಷಣೇ ॥ ೯ ॥

॥ ಕಂದ ॥

ಮುಳಿದು ತಿಳುಪಿದಡೆ ತಿಳಿದಾ ।
ಗಳೆ ಮುಳಿಯಿಸಿ ತಿಳಿಪಿ ಮೃದು ರತೋತ್ಸವದಿಂದಂ ॥
ಮಳೆಗಾಲದೊಳಿರುಳರ್ಧಂ ।
ಗಳೆದಿಂ ಬಳಿಕೆಳಸಿ ಕೂಡಿಗೆಲ್ಗಾ ವಧುವಂ ॥ ೧೦ ॥

ಕಾಲಂ ದೇಶಂ ಪ್ರಕೃತಿಗ ।
ಳಾಳೋಚಿಸಿ ಸಹಜಮಕ್ಕುಮಾದೊಡಮೇಂ ನೀ- ॥
ಳಾಳಕಿ ರತಿಕಾಂಕ್ಷೆಯ ।
ಕಾಲದೊಳಂ ನೆರೆಯೆ ನೆರೆಯೆ ನೆರೆಗುಂ ಸುಖಮಂ ॥ ೧೧ ॥

೧ ಗ. ಬಯಸುತ್ತಿಪ್ಪರ್ಕಳ್ ನಿತಾಂತಂ
೨ ಗ. ಮಿಂದು ಕರಂಗಳು ಮಿಂದುಕಾಂತಮುಂ
೩ ಗ. ತಾಣದೊಳೊಯ್ದು ರತೋತ್ಸವ

ಇಂತೀ ಪೊತ್ತೆನ್ನದೆ ನಿ |
ದ್ರಾಂತದೊಳೆಂತಪ್ಪ ಪೊತ್ತರೊಳುಮೆಲ್ಲರ್ಗಂ ||
ಕಂತೂತ್ಸಾಹಂ[1] ಪೆರ್ಚುಗು |
ಮಿಂತಿದರಿಂದರಿದು ಕೂಡೆ ಕೂರುಗುವೊಳ್ಪಂ[2] || ೧೨ ||

ಇಂತೀ ಪ್ರಕೃತಿ ಗುಣಂಗ- |
ಳ್ಕಾಂತೆಯರೊಳ್ಬೆರಸಿ ತೋರೆ ಸಂಕೀರ್ಣಯುರಾ ||
ದಿಂತಿವರ ಭೇದಮಂ ನಯ |
ದಿಂ ತಿಳಿದೊಡಗೂಡಿ ಗೆಲ್ದೊಡಾತಂ ಚದುರಂ || ೧೩ ||

ಗದ್ಯ:— ಇದು ಚಂದ್ರರಾಜ ವಿರಚಿತಮಪ್ಪ ಮದನತಿಲಕದೊಳು ತ್ರಿದೋಷ ಪ್ರಕೃತಿ ವರ್ಣನಂ ಪಂಚಮಾಧಿಕಾರಂ ಸಮಾಪ್ತಂ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ

---

೧ ಕ. ಕಂತುವಿನುತ್ಸಾಹಂ
೨ ಕ. ಕೂರುಗು ನೋಳ್ಪಂ

# ಷಷ್ಠಾಧಿಕಾರಂ

ವನಿತೆಯರುತ್ತಮು ಮಧ್ಯಮ |
ಕನಿಷ್ಠ ನಾಯಕಿಯರೆಂದು ಮೂರುಂ ತೆರದಿಂ ||
ವನಿತೆಯರಪ್ಪರ್ ಜಗದೊಳು |
ವಿನುತೆ[1] ನೀನವರ ಭೇದಮಂ ಕೇಳ್ಪೇಳ್ವೆಂ || ೧ ||

ವಿದ್ಯುನ್ಮಾಲೆ ||

ಅಂಬೂದ್ಭೂತಾಸ್ಯಂ ಸನ್ಮಧ್ಯಂ |
ಕಂಬುಗ್ರೀವಂ ಪ್ರಾಕುಶ್ರೋಣೀ ||
ಬಿಂಬಂ ಭೃಂಗಾಳೀವಕ್ತ್ರೇಶಂ |
ಬಿಂಬೋಷ್ಠಂ ಶ್ರೇಷ್ಠ ಸ್ತ್ರೀಗಕ್ಕಂ || ೨ ||

ಕಳಕಂಠ ||

ನೆಗಳ್ದ ಚತುಃಷ |
ಷ್ಟಿಗಳೆರಡುಂ ನೆ ||
ಟ್ಟಗೆ ವಿದಿತಂ ಕೂ |
ರ್ಮೆಗೆ ಮಿಗೆ ಕೂರ್ಪರ್ || ೩ ||

ಮಲ್ಲಿಕಾಮಾಲೆ ||

ಹಾವಭಾವ ವಿಲಾಸ ವಿಭ್ರಮ ಯುಕ್ತೆ ಚೆಲ್ವೆ ಮನೋಜ್ಞೆ ನಾ |
ನಾ ನಿಧೋದ್ಧುರತಿ ಪ್ರವೀಣೆ ಕಳಾಗಮಜ್ಞೆ ವಿದಗ್ಧೆ ನಿಃ ||
ಕೇವಲಂ ಶುಚಿಯುಕ್ಕುಮುತ್ತಮಮಪ್ಪ ಗಾಯಕಿ[2]ಯೆಂದು ಸ |
ದ್ಭಾವದಿಂದರಿವಂ[3] ಮನೋಭವನೆಂಗುಮಿಂದುನಿಭಾನನೇ || ೪ ||

---

೧ ಗ. ವಿನೂತೆ  ೨ ಕ. ಶುಚಿಯುಕ್ಕು ಮುಖ್ಯಾಂಗನಾಗೊಪ್ಪ
೩ ಕ. ದ್ಭಾವಿಂದಲಿವಂ

ಶಾರ್ದೂಲ ವೃತ್ತ ||

ಇಂತೀ ಪೇಳ್ದ ಗುಣಂಗಳುಂ ನೆರೆಗೆ ಮೇಣ್ಕುಂದಿರ್ಕೆ ಪೆರ್ಚಿರ್ಕೆ ಮೇ |
ಣಂತಾ ವೇಶ್ಯಯನಾವಗಂ ಗಣಿಕೆಯಂ ಮಾಡಿಟ್ಟು ನಾಣ್ಮೆತ್ರಿ[೧]ನಿಂ ||
ದಂತಾ ಬೋದರೊಳೊರ್ಬರಿರ್ಬರು ಮದಕ್ಕಿಕ್ಕೋಟಿ ಯೆಂಬಂತಿದೆಂ ||
ದಂತಾಗಳ್ನಿಜ ಕಾಂತೆಗೋತು[೨] ನುಡಿದಂ ಪ್ರತ್ಯಕ್ಷ ಪುಷ್ಪಾಯುಧಂ || ೫ ||

ಕಂದ ||

ಉತ್ತಮ ವನಿತಾ ಗುಣಗಣ |
ವೆತ್ತಂತನಗಿಲ್ಲದಿರ್ದೊಡುಳ್ಳನಿತಂ ಸೋ ||
ತಾ ತಾಂ[೩] ನಡೆವಳು ಮಧ್ಯಮೆ |
ವೃತ್ತಕುಚೆ ಕನಿಷ್ಠೆಯಿನಿತು ಗುಣವಿಲ್ಲದವಳ್ || ೬ ||

ಉತ್ಪಳ ||

ಎಲ್ಲಿದನೊಳ್ಳಿದಂ ಗುಣಿ ಸುರೂಪಿ ಕುರೂಪಿ ನಿಸಾರಿ[೪]ನುದಾರಿ ಚಿತ್ತಮುಂ |
ಬಲ್ಲನೊರಂಟನಲ್ಲನನೃತಂ ನುಡಿಯಂ ಪ್ರಭು ಶೌಚಿ ಪಾಸಮುಂ ||
ಕಲ್ಲನಮಾನ ಭೋಗಿ ಚದುರಂ ಸುಲಲಿತಕಾರನ[೫]ಪ್ಪವಂ |
ಗಲ್ಲದೆ ಸೊಲ್ಲ್ಗಮೇ ಮನದೊಳುತ್ತಮ ನಾಯಕಿ ನೀಲಕುಂತಳೇ || ೭ ||

ಕುಂತಳೆ ||

ನಟವಿಟ ಹೀನ ದೀನವರ್‍ ಯಾಚಕ ಮಲ್ಲಗೊಲ್ಲ ಸ |
ದ್ಭಟ ಪಟು ಪುಷ್ಟ ಶಿಷ್ಟ ಸುಕವೀಂದ್ರ ಮುನೀಂದ್ರ ವಿದಗ್ಧ ಮುಗ್ಧನಿ ||
ಚ್ಛಟ ಪಟು ವಾದಿ ವಂದಿ ಬುಧ ಮಾಗಧ ನಿತ್ಯ[೭]ನಿಕೃಷ್ಟಭಾವಲಂ |
ಪಟಕಟ ಕಕ್ಷ ಮಾನಧನಮಂ ಕುಡುವಂಗಡೆನಿಪ್ಪವಂ ಪ್ರಿಯೇ || ೮ ||

---

೧ ಗ. ಮಣ್ಮಾತಿನಿಂ  ೨ ಗ. ಕಾಂತೆಗೊಂಡು ನುಡಿದಂ  ೩ ಗ. ದಾತ್ತ್ರಂ
೪ ಗ. ಕುಲಜ್ಞನುದಾರಿ ಚಿತ್ರಮುಂ ೫ ಗ. 'ಚದುರಂ ಸ × × × ಕಾರನಪ್ಪಿವಂ'
೬ ಗ. ವಟು  ೭ ಗ. ಶ್ರೇಷ್ಠ

ಏಕಾಕ್ಷರಿ ಕಂದ ॥

ನಿನ್ನನ್ನಂ ನಿನ್ನನ್ನೆಂ ।
ನಿನ್ನಾಂನುನನನ್ನ ನಿನ್ನನನ್ನೆಂ ನಿನ್ನಂ ॥
ನಿನ್ನನ್ನಾಂ ನಾಂ ನೀನೆನೆ ।
[1]ನಿನ್ನೆನ್ನಂ ನನ್ನಿಂ ನಿನ್ನನಾ ನಿನನೇನೇಂ ॥ ೯ ॥

ದ್ವ್ಯಕ್ಷರಿ ॥

ದನುನಂದನ ನಿನನಂದನ ।
ನಿನನಂದನ ನಿನನ ನಂದನನ ನಂದನನಂ ॥
ದಿನನಂದನ ನೆಂದನುದಿನ ।
ದನನಿನನಾನನ್ನನಾದೆನಾಂದಂ ನಿನ್ನಂ ॥ ೧೦ ॥

ತ್ರ್ಯಕ್ಷರಿ ॥

[2] ದಾನನಂದನಂ ಮಾನಾ ।
ಮಾನಂ ಮಾನಿನೀಮನೋಮದನಂ ॥
ಮಾನಿನಂ ನಾನಾ ನಾಮದಿ[3]ನಂ ।
ದನನುದ್ದಾಮ ದಿನಿದಂ ದಾಮಂ ॥ ೧೧ ॥

ಅಕಾರಾಂತ ಕಂದ ॥

ಹರ ಹಾಸ ಧವಳ ಕಮಳಾ ।
ಕರಶರಧವಳಾಭ್ರಹಾರತಾರಾಚಳ ಪಾಂ ॥
ಡುರ ಪತ್ರ ಖಂಡ ತಾರಾಂ ।
ಬರರಂಗಾ[4]ಜಳ ಶಶಾಂಕ ಶಂಕರವಲಯಂ ॥ ೧೨ ॥

---

೧ ಗ. ನೀನೇಂ ನನ್ನಂ ನಿನನ್ನ ನಾನಿನನೇನೇಂ ॥ ಕರ್ಣಾಟಕ ಕವಿಚರಿತೆ I, ೯೫ರಲ್ಲಿ ಕಡೆಯ ಸಾಲು ಹೀಗಿದೆ :— ನಿನ್ನೆನ್ನಂ ನನ್ನಿ ನಿನ್ನನಾ ನಿನನೆನ್ನೆಂ ॥
ಗ. ಪ್ರತಿಯಲ್ಲಿ ಹೀಗಿದೆ :— ನೀನೇಂ ನಂನಂ ನೀನಂನ ನಾನಿನನೇನೇಂ ॥

೨ ಗ. ಪ್ರತಿಯಲ್ಲಿ ಈ ಪದ್ಯವು ಹೀಗಿದೆ :—
ದಾನನಂದನಂ ಮಾನಾ । ಮಾನಂ ಮಾನಿನಿ ಮನೋಮದನಂ ಮಾದಿನಂ ॥
ನಾನಾನಾಮನಂದನನು । ದ್ದಾಮದಿನಿದಂದಾಮಂ ( ? ) ॥

೩ ಕ. ಕವಿಚರಿತೆ I ೯೬ರಲ್ಲಿ ಹೀಗಿದೆ :—
. . ನಾಮನಂದನನುದ್ದಾಮ ನಿನಿದಂ ದಾಮಂ ॥

೪ ' ಬಳಗಂಗಾ ' ಎಂದು ಇರಬೇಕು.

ನಿರೋಷ್ಠ್ಯ ಕಂದ ||

[೧]ಖರಕಿರಣನ ತನಯನ ಖರ |
ಕಿರಣಕರ ದಶರಥನ ನಳನಜಳಜ ಜನಧರಾ ||
ವರನ ಶಶಧರನ ಚಕ್ರನ |
ಚರಿತೆಯೆ ನಿಜಚರಿತಮೆನಿಸಿದಾತನನೊಲ್ದಂ || ೧೩ ||

ಇದುವೆ ಜತ್ತರಟ್ಟವುಮಕ್ಕುಂ

ಸ್ರಗ್ಧರೆ ||

ಭೀತಂ ಲೋಚಂ[೨] ಶಠಂ ನಿರ್ಗುಣಿ ಕಿಸುಗುಳಿಗಂ ನಿರ್ಲಜ್ಜಂ ಪಾಪಿಕಳ್ಳಂ|
[೩]ಭೂತೆಗಂ ಕಾತರಂ ನಾಣಿಲಿ ಕುಳಿಗಳ ಪಂದೊಡಗಂ[೪] ನೀಚನುಗ್ರಂ ||
ವಾತಾತ್ಮಂ ಚಿಲ್ಲನೂನಂ ಪಿಸುಣಿಗನಳಿಪಂ ಸಂಚಳಂ ಪಾರೊರಂ ಟಂ[೫] |
ಪೂತಂ ಕಾಯಂ ಜಡಂ ವಂಚಕನುರ ನಳಿಯಾಣ್ಮಾರ್ಖ
ನಾಚಾರಹೀನಂ || ೧೪ ||

ಓಕಾರಾಂತ ಕಂದ ||

[೬]ಓವೋವೋವ್ವೊ ಕೋವೊ |
ವೋಪೋ ಪೋತೋನೋ ಪೋಪೊಯ್ವೊಳ್ಗೊಲೋ ||.

೧ ಗ. ಪ್ರತಿಯಲ್ಲಿ ಹೀಗಿದೆ :—
ಕರಕಿರಣನ ತನಯನ | ಕರಕಿರಣ ದಶರಥನ ನಳನ ಜಳಜಜನಧರಾ ||
ವರನ ಶಶಧರನ ಚಕ್ರನ | ಚರಿತೆಯೆ ನಿಜ ಚರಿತಮೆನಿಸಿದಾತನನೊಲ್ದಂ ||
ಕ. ಕವಿಚರಿತೆಯಲ್ಲಿ (ಪು. ೯೬) ಹೀಗಿದೆ :—
ಖರಕಿರಣನ ತನಯನ ಖರ | ಕಿರಣನ ದಶರಥನ ನಳನ ಜಲಜ ಜನಧರಾ ||
ವರನ ಶಶಧರನ ಶಕ್ರನ | ಚರಿತೆಯೆ ನಿಜಚರಿತವೆನಿಸಿದಾತನನೊಲ್ದಂ ||
೨ ಗ. ಲೋಗಂ ೩ ಗ. ಬೂತೆಗ್ಗಂ ೪ ಗ. ರೊಡಗಂ ೫ ಗ. ಪಾರೊರಂಟಂ
೬ ಗ. ಪ್ರತಿಯಲ್ಲಿ ಹೀಗಿದೆ :— ಓಕಾರಾಂತ ಕಂದ || ಅನುಷ್ಟುಪ್ ||
ಓವೊ ವೊಲ್ವೊ ಕೋವೊ ವೋಪೊ | ಪೋತೋ ನೋಪೋ ಪೊಯ್ವೊಳ್ಗೊಲೊ ||
ಕೋವೋಳ್ವೊಯ್ವೋ ಸೋವೋಂ ಕೋಳ್ಗೋ | ಳ್ಗೊಂದೋ ನೊಂದೋ
ನೋರ್ಪೋ ಪೋವೋ ||
ಕವಿಚರಿತೆಯ ಪಾಠವು ಹೀಗಿದೆ :—
ಓವೋ ವೋಲ್ವೋ ತೋವೋ ವೋವೋ | ಪೋವೋ ನೋಪೋ ಪೋಯ್ವೋ
ಳ್ಗೊಲೋ ||
ಕೋವೋಲ್ವೋಯ್ವೋ ಸೋವೊಂಕೊಳ್ಗೊಳ್ | ಗೋವೊಂ ನೊಂದೋ
ನೋರ್ಪೋ ಪೋರ್ವೋ ||

ಕೋವೋ ಲ್ವೋಯ್ವೋ ಯೋಸೋ |
ವೋಂಕೋಳೊಂದೋ ನೋಪೋ ಪೋಪೋ || ೧೫ ||

ಒಕಾರಾಂತಮುಮೋಕಾರಾಂತಮುಮೊಡಗೂಡಿಪ್ಪ ಕಂದ೧ ||

ಒಲೆದೋರೆ ಪೊಳೆವೋ |
ರಲೆತೊತೋ ಪೋಗಂಬೊಡೆ ವೋಡೆಂದೊಡೆವೋ ||
ಬೆಳ್ವಲೆಗೊಲೆವೋ ಪೊಣ್ವಡೆ |
ಪೊರೆವೊರೆವೊ ಕೆಂದೋಳ್ಗೆ ಕೊಳ್ಳೆನೊಡವೋಂಬೆಳ್ವೊ|| ೧೬ ||

ಎನಿಪ ವನನುತ್ತಮಸ್ತ್ರೀ |
ಜನವೋತೊಡಗೂಡರ್ಥದಾಪೇಕ್ಷೆಯೊಳಿಂ ||
ಬಿನೆ ಕೂರ್ಪ೨ ತಿರ್ಪರದೆ |
ತೆನೆ ಘನ ಕುತ್ತಕ್ಕಳಿಕ್ಕೈಪೆಮದುರ್ಗಂ ಬರವೋಲ್ || ೧೭ ||

ಒಡನೊಡನೆ ಮುಳಿದು ತಿಳಿವಂ |
ಗುಡುಗದೆ ಕಿರಿಕಿರಿದನರಿದು ಕುಡುವಂ ಕುಡುವಂ ||
ಕುಡದಂಗೆ ಸುರತ ಸುಖಮಂ |
ಪಡೆವಂಗೆ ವಿಮುಗ್ಧೆ ಮಧ್ಯಮಾಂಗನೆ ಸೋಲ್ಗುಂ || ೧೮ ||

---

೧ ಕ. ಕವಿಚರಿತೆ :— ‘ ನೊಡಗೂಡಿಪುದರ್ಕೆ ’ ಅಲ್ಲಿ ಈ ಪದ್ಯವು ಹೀಗಿದೆ :—
ಒಲೆದೊರೆಪೊಳೆವೊರೆಲೆ ತೊತೊ | ಪೋಗೆಂಬೊಡೆ ವೋಡೆಂದೊಡೆವೋ ||
ಬೆಳ್ವಲೆಗೊಲೆವೋಪೆಳ್ವೊಡೆಪೊರೆವೊರೆವೋಕೆಂದೊಳ್ಗೆ ಕೊಳೆನೋಡೊವೊಲ
ಬೆಳ್ವೊಂ ||
ಗ. ಪ್ರತಿಯಲ್ಲಿ ಪಾಠಭೇದವಿದೆ :—
ವೊಲೆದೊರೆ ಪೊಳೆವೊ | ರೆಲೆ ತೊತೊ ಪೊಗೆಂಬೊಡೆ ಪೊಡೆಂದೊಡೆ ||
ಳ್ವಲೆ ಗೊಲೆವೊ ಪೇಳ್ವೊಡೆ | ಪೊರೆವೊರೆ ವೊಕೆಂದೊಳ್ಗೆ ಕೊಳೆನೊಡೊವೊಂ
ಬೆಳ್ವ ||

೨ ಗ. ತೀರ್ಪ್ಪರದೆಂ |
ತೆನೆ ಘನಕುತ್ತಕಳ್ಕಿ ಕೈಪೆಯ ಮದುರ್ಗಂಬರವೊಲ್ ||

ಉಜ್ವಳ ||

ಆಳಲಿಪಂ ಜಡಿವಂ ಕಡಿಕೆಯ್ವಂ ಕೆಮ್ಮನೆ ಖಂಡಿಸಿ ಕಾಡುವಂ |
[೧]ಮುಳಿದು ದಂಡಿಪನಾಗಳೆ ಮೇಗಂ ತೋರುವನಂತೆಯು ಮುಂತೆ ತಾ ||
ಗಳಿವನ ಸ್ಥಿರನೀಯನೆನಿಪಂಗೊಲ್ದು ಕನಿಷ್ಠ ವಧೂಜನಂ |
ಸುಳಿಗುಮೆಂದರ್ದಿ ಭೂಪದಿನಿ[೨]ಪಾಮನ್ಮಥ ಸನ್ನಿಭವಲ್ಲಭಾ || ೧೯ ||

ಗದ್ಯ:—ಇದು ಚಂದ್ರರಾಜ ವಿರಚಿತಮಪ್ಪ ಮದನತಿಲಕದೊಳು ಉತ್ತಮ ಮಧ್ಯಮ ಜಘನ್ಯನಾರಿಯರ[೩] ವರ್ಣನಂ ಷಷ್ಠಾಧಿಕಾರಂ ಸಂಪೂರ್ಣಂ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

---

೧ ಕ. ಉಳಿದು ೨ ಗ. ಭೂಪಡಿಗಿಪಾ ೩ ಗ. ಜಘನ್ಯ ನಾಯಿಕೆ

# ಸಪ್ತಮಾಧಿಕಾರಂ

ವಯಸವಿಭೇದದಿಂ ಬಾ ।
ಲೆ ಯೌವನೆ ಪ್ರೌಢೆ ಲೌಲ್ಯೆಯೆಂದಿಂತು ಧರಿ ॥
ತ್ರಿಯೊಳಪ್ಪನಾರ್ಗಲ್ವಕರಾಂ ।
ತೆಯರಂದಮನಿಂತೆಂದು ನೀಂ ಕೇಳ್ಪೋಳ್ಪಿಂ ॥ ೧ ॥

[1]ಪದಿನಾಲ್ಕು ಬಾಲೆಗೆ ಮೂವ ।
ತ್ತದಟಿಸ ಯೌವನೆಗೆ ನಾಲ್ವತ್ತೆರಡಾ ಪ್ರೌಢಾ ॥
ಸ್ಪದವಾಕೆಗೆ ಮೀಹಂಚ ।
ಪ್ಪದಂಗನೆಗಂ ಮೇಲೆ ಲೌಲ್ಯೆಗಬ್ದಂ ವನಿತೆ ॥ ೨ ॥

ರಥೋದ್ಧತ ॥

ತಂಬುಲಂ ಕುಸುಮಮಿಂಬು ಪಣ್ಣಲಂ ।
ಡಂಬದಾಟಮಿನಿಯೂಟಮುಚ್ಚಿಱಿಂ ॥
ದೆಂಬ ಮಾತು ಮೃದು ಸಂಪ್ರಯೋಗನೊ ।
ಳ್ಪಿಂಬವಂ ನೆರೆದು ಗೆಲ್ಗೆ ಬಾಲೆಯಂ ॥ ೩ ॥

ಕಂದ ॥

ತುಡುಗೆಗಳಿಂ ವಸ್ತ್ರಗಳಿ ।
ನೆಡಂಬಡಣಮಿಲ್ಲದಿರ್ಪ ಭೋಗದಿನಿಂಪಿಂ ॥
ಗೆಡೆಗೊಂಡು ಸುರತ ಸುಖಮಂ ।
ಪಡೆಗಾ ಯೌವನೆಗೆ ಕೂರ್ಮೆಯಂ ಚದುರ ವಿಟಂ ॥ ೪ ॥

ಎಡೆಯಕ್ಕರ ॥

ಕರಜವೊರಡರಿಂ ಬೆಕ್ಕು ಪಾಯ್ವುಪಾಂಗಿನಿಂ ।
ತ್ವರಿತದಿಂ ಪೆಗಲನೊತ್ತು ಗುಹ್ಯಾಸನದಿಂ ॥
ತಿರುತೆ ಕರ್ಣಮೂಲಮಂ ಚುಂಬಿಸೆ ಬಾಲೆಗೆ ।
ಸುರಿಗುಂ ಕಾಮಾಂಬು ನಿಶ್ಚಯಮಿದನಱಿಗೆ ॥ ೫ ॥

---

೧ಗ. ಪಡಿನಾಲ್ಕುಬಲೆಗೆ

ಕಂದ ||

ಅತಿ ಚದುರತೆಯಿಂ ಸೌಖ್ಯದಿ |
ನತಿಶಯ ರತಿಯಿಂ ಸಚುಂಬನಾಲಿಂಗನ ಪೀ ||
ಡಿತದಿಂ ಪ್ರೌಢೆಯನಾಗಳೆ |
ಮತಿಗಿಡೆ ಗೆಲ್ಗುಂ ವಿಟಂ ದಿಟಂ ಚಂದ್ರಮುಖಿ || ೬ ||

ಮನವಾರ್ತೆಯ ನಂಟರ ಮಾ |
ತಿನ ಕೂರ್ಮೆಯನುಂಟು ಮಾಡಿ ಗೌರವದಿಂ ಮೆ ||
ಲ್ಲನೆ ತೋರಿ ರತಿಯೊಳಿಂದುಂ |
ಮನಮಜ್ಜಿದೊಡಗೂಡೆ ಲೌಲ್ಯೆಯಂ ಗೆಲ್ಗರಿವಂ || ೭ ||

ಗದ್ಯ :— ಇದು ಸಕಲ ಬುಧಜನವಿನುತ ಕಾವ್ಯಾಲಂಕಾರ, ನೀತಿ ಬಂಧನಮುಂ ಛಂದೋಮಹಾರ್ಣವಮುಂ ಕವಿತಾಮಹಾರ್ಣವಂ ಶ್ರೀ ಚಂದ್ರರಾಜ ವಿರಚಿತಮಪ್ಪ ಮದನತಿಲಕದೊಳು, ಬಾಲೆ, ಯೌವನೆ, ಪ್ರೌಢೆ, ಲೌಲ್ಯೆಯೆಂಬಿವರನುಭವವರ್ಣನಂ ಸಪ್ತಮಾಧಿಕಾರಂ ಸಂಪೂರ್ಣಂ ಮಂಗಳಮಹಾ ಶ್ರೀ ಶ್ರೀ ಶ್ರೀ

---

# ಅಷ್ಟಮಾಧಿಕಾರಂ

ಲಲನಾ ಜನದೊಳು ಕುಲವಧು |
ಕುಲಟಾಂಗನೆ ವೇಶ್ಯೆಯೆಂದು ಮೂರುಂ ತೆರದಿಂ ||
ಲಲಿತಾಂಗಿಯರಪ್ಪರ್ಕೋ |
ಮಳೆ ನೀನಿನ್ನಿವರ ಭೇದಮಂ ಕೇಳ್ಪೇಳ್ವೆಂ || ೧ ||

ರತಿಗೆಣೆಯೆನಿಸಿದ ಗುಣ ಸಂ |
ತತಿಯುಳ್ಳಾಕೆ ದೇವತಾಂಶಕೆಯುಂ ತಾ ||
ಸತಿಯುಂ ಕೊಂಡಾಡುಗೆ ತ |
ತ್ಪತಿಗಂ ಧರ್ಮಾರ್ಥಕಾಮ ಭೋಗಂ ನೆಗಳ್ಗುಂ || ೨ ||

ಸತಿ ಗುಣವತಿ ದೊರೆಕೊಂಡಡೆ[೧] |
ಪತಿಗಾ ಸ್ತ್ರೀ ರತ್ನಮೆಂಬ ಪೆಸರುಂ ಪಡೆಗುಂ ||
ಸತಿ ದುರ್ಗುಣೆ ದೊರೆಕೊಂಡಡೆ[೨] |
ಪತಿಗಾ ಸ್ತ್ರೀ ವ್ಯಾಧಿಯೆಂಬ ಪೆಸರುಂ ಪಡೆಗುಂ || ೩ ||

ಇದುವೆ
ಖಂಡಕಮುಮುಕ್ಕುಂ ||

ದೂರುತಿಪ್ಪಳ್ ಪೆಂಪಂ | ತೋರಳ್ಪ[೩]ಡಮುಡಿಸಿದೊಡಣಮುರದಿನಿಸಂ |
ನೂರೆಂಟಂ ಬೈವಳ್ತಾಂ| ಬೇರೊಂದಣಕದೆ ಸೆಣಸುವಳೊಡನೆ ಕಿನಿಸೀವಳ್||
ಪಾರೆಂದುಂ ಕಂಡಿರ್ಪಳ್| ಜಾರೆಂ ಕುಹಕಮನೊಡರಿಪಳನುಭವಿಸಳಳಿಪಿಂ |
ಸೂರಿಸುವಳ್ ಸುಯ್ವಳ್ ಪೊ | ಯ್ವಳ್ತಾಂ ಕುಲವಧುವಾದಡೆ[೪] ಕುಲವನಿತೆ || ೪ ||

---

೧ ಕ. ದೊರೆಕೊಂಡರೆ

೨ ಕ. ದೊರೆಕೊಂಡರೆ

೩ ಗ. ತೋರಳ್ತಡಮುಡಿಸಿ

೪ ಗ. ವಾದರೆ

ಕಂದ ||

ಧರ್ಮಾರ್ಥಕ್ಕತಿಥಿಗೆ |
ಪೆರ್ಮೆಯ ಪಿತೃಗಳ್ಗೆ ದೇವಕಾರ್ಯಕ್ಕೆಂದುಂ ||
ನಿರ್ಮಳ ಸಂತತಿಗಳ್ಗ |
ಕ್ಕೂರ್ಮೆಯ ಕುಲವನಿತೆ ಮುಖ್ಯವಾಕೆಯೆ ಪೂಜ್ಯಂ || ೫ ||

ಚಂ ||

ಗುರುಗಳ ತಾಯಿತಂದೆಯು ಮಹಾಮುನಿಪರ್ಕಳ ವಿಪ್ರವರ್ಗವಿ (ದಿ) |
ಪ್ಪರ ನಿಜಬಾಂಧವ ಪ್ರಕರದಗ್ನಿಯ ಸನ್ನಿಧಿಯಲ್ಲಿ ತಂದ ತ ||
ತ್ಪುರುಷನನೊಲ್ಲದನ್ಯರೊಡಗೂಡಿ ಗುಣೋನ್ನತಿಗೆಟ್ಟು ಗೋತ್ರಮಂ |
ನರಕದೊಳಡ್ಡಿ ಬದ್ಧವಧು ಸಜ್ಜನಮೋ ತರಳಾಯತೇಕ್ಷಣೇ || ೬ ||

ಕಿಸುಗುಳಿ ಕಳ್ಳಿ ಮೂರ್ಖೆ ಶಠೆ ಪಾಪಿ ಕುರೂಪಿಯಸತ್ಯವಾದಿ ಸಾ |
ಹಸಿಗೆ ಕನಿಷ್ಠೆ ನಿಷ್ಠುರೆ ಮದೋದ್ಧತೆ ಸಂಚಳಿ ಪಾರುಚಾರಣಂ ||
ಪಿಸುಣೆ ದುರಾತ್ಮೆ ದುಶ್ಚರಿತೆ ದುರ್ಭಗೆ ದುರ್ಮತಿ ದುಷ್ಟೆ ದುಷ್ಟೆ ದು |
ರ್ವ್ಯಸನೆ ದುರಾತ್ಮೆಯಪ್ಪ ವಧು ಸಜ್ಜನಮೋ ತರಳಾಯತೇಕ್ಷಣೇ || ೭ ||

ನಯವಿದೆ ಶೌಚೆಯಲ್ಪವಚೆ ಸಾಧು ಸುಶಾಲಿ ಸುಪೂಜ್ಯೆ ಸಂತತಂ |
ಭಯಯುತೆ ಪುರುಷಭಕ್ತೆಯನುಕೂಲೆ ವಿದಗ್ಧೆ ಮನೋಭವೋತ್ಸವ- ||
ಪ್ರಿಯೆ ಮನದನ್ನಳುಂ ಮನವನಿರ್ಕುಳಿಗೊಳ್ವಳು ನಿಃಪ್ರಪಂಚೆ ನಿರ್ಮ- |
ಳಯುತೆ ದೇವ ಬಂಧುಜನ ವತ್ಸಲೆ ಸಜ್ಜನನಾರಿ ಮತ್ಪ್ರಿಯೆ || ೮ ||

ತ್ರಿಪದಿ ||

ಅರಿಯದೆ ಪೆಡರುಂತೆ[೧] ಜರಿಚುವರು ಸುರತಮೇ |
ತರ ಲೇಸೊ ಕಷ್ಟ ಮಹೀವಳಯದೊಳೆಂದುಂ |
ನೆರೆಯೆ ಸಜ್ಜನರ ರತಿಲೇಸು || ೯ ||

---

೧ ಗ. ಪೆರರುಂತೆ

ಕಂದ ||

ಂನಿವಾರ್ಯಮಬಹುಮಾನಂ |
ಚರಮಿತ್ರಮಾನುಕೂಲ್ಯಮವಿರುದ್ಧಮದೋ ||
ಷನಮನವದ್ಯಮಸಂದಿತ |
ಮನಾಕುಳಂ ಕುಲನಿತಂಬಿನೀ ಸಂಭೋಗಂ || ೧೦ ||

ಉಜ್ವಳ ||

ನಯಮ ನೋಟ ಮ ಮೇಳಮಸೊಳ್ಪು ನಲ್ಮೆಯುನಕ್ಕರನಾಗಳುಂ |
ಪ್ರಿಯುದ ಮಾತಿನ ಭಂಗಿಗಳು ಕೊಂಡಾಟಮನೊಪ್ಪುವ ಕೂಟಮುಂ ||
ಬಯಸಿ ಬಾಲೆಯು ಚಿತ್ತಮನೆತ್ತು ಸಂತಮುದಂಗಿಸುವೋಜೆಯಿಂ |
ಸಿಯಿಸನಿಂದರಿವಾತನೆ ಕಾಮಂ ಭಾವಿಸು ಪಂಕರುಹಾನನೆ || ೧೧ ||

ಕಂದ ||

ವಂಚಿಸದೆ ಪುಸಿಯುದಳುಪದೆ |
ಸಂಚಳಸದೆ ಪುರುಡುಗೆಯ್ಯದುರದಿರದೆ ಕರು ||
ಬಂಚಿಸದಳಲಿಸದಳುಂಗಿಸು |
ವಂ ಚದುರಂ ಸಜ್ಜನಂಗಳಂ ಮೃಗನಯನೆ || ೧೨ ||

ಮನೆವಾರ್ತೆಯ ಕೋಟಿಯೊಳು[೨] |
[೩]ಜನಪತಿಯನುಭವಣೆಯಿಂದಮಂಗಜರಾಜಂ ||
[೪]ಜನಿಯಿಸದೆಂದು ಕೆಲರ್ಸ |
ಜ್ಜನದಿಂ ಮನೆವಾರ್ತೆಗೆಯ್ಸಲೊಲ್ಲರ್ ಚದುರರ್ || ೧೩ ||

---

೧ ಗ. ಅನಿವಾರ್ಯ ಮಬಾಹ್ಯಮಾನಂ |
ಚನಮಕೃತಮಾನುಕೂಲ್ಯಮವಿರುದ್ಧಮದೋ-

೨ ಸೂ. ಮ. (೬, ೯೫) ಕೋಟಲೆಯೊಳ್

೩ ಸೂ. ಮ. (ಸದರ) ಜನಪಪಗಮನಂಗಳಿಡೆಯೊಳಂಗಜರಾಜಂ ||

೪ ಸೂ. ಮ. (ಸದರ) ಜನಿಯಿಕುರ್ಮೆಂದು ಕೆಲರ್ ಸ |

ಉಂತುಂ ಪೆಂಡಿರ ಮುಖ್ಯತೆ |
ಯೆಂತುಂ ಗುಣವಾಗಲರಿಯಸವುಮುಮುಳಿಗುಂ ||
ಭ್ರಾಂತೀಂ ಲೋಭತೆಯುಂ ಪಳಿ |
ಯುಂತನಗುಂ ಪೊರ್ದದಿರ್ಕಮೆ ಚಚ್ಚರದಿಂ || ೧೪ ||

[೧]ಗುರುಗಳ ನಂಟರ ಕೆಳೆಯಂ |
ಪೊರೆವಾಳ್ದನ ಮೆಚ್ಚದವರ ಸವತಿಯ ಕೆಲದೊಳು ||
ಪರಿಭವಿಸಲು ನರನೆತ್ತಲು |
ಕರಮುಳಲಿಸಲಾಗದಾತ್ಮ ವಧುವಂ ಸತಿಯಂ || ೧೫ ||

ಸುದತಿಯರಾರುಂ ಸಂಸ |
ರ್ಗದ ಕತದಿಂ ದೋಷಮುಂ ಗುಣಂಗಳ ಮುನ್ನೋ[೨] ||
ಡದೆ ಕೈಕೊಳ್ವುದರಿಂದಂ |
[೩]ಮೊದಲೊಳು ಯೋಚಿಸುಗೆ ನೀತಿಯಂ ಧರ್ಮಮುಮಂ || ೧೬ ||

ಲತೆ ಮೊದಲಾಗಿ ಸಮೀಪ |
ಸ್ಥಿತ ವೃಕ್ಷಮದೆಂತು[೪]ಟಾದೊಡಂ ಪತ್ತುಗುಮಾ ||
ಸ್ಥಿತಿಯಂ[೫] ಸತಿಸಂಗತ್ಯದ |
ಕತದಿಂ ಕೆಟ್ಟಾರೊಳಾದೊಡಂ ಮರೆವಾಳ್ಗುಂ[೬] || ೧೭ ||

---

೧ ಸೂ. ಸು. (೮, ೯೬) 'ಕೆಳೆಯರ' 'ಕೆಲದೊಳ್' 'ಪಲ್ ನೆರನೆತ್ತಲ್' ಎಂದಿದೆ. ಕಡೆಯ ಚರಣದಲ್ಲಿ 'ದಾತ್ಮ ವಧುವಂ ಸತಿಯಂ' ದ ಬದಲು 'ಸತಿಯಂ ಚದುರಂ' (ಪಾಠಾಂತರ 'ಪುರುಷಂ') ಎಂದಿದೆ.

೨ ಸೂ. ಸು. ೮, ೯೭ : 'ಗುಣಂಗಳುಮಂ ಮಾಣದೆ'

೩ ಸೂ. ಸು. ೮, ೯೭ : 'ಸುದತಿಗೆ ಯೋಚಿಸುಗೆ'

೪ ಸೂ. ಸು. ೮, ೯೮ : 'ನೆಂತುಟಾದೊಡಂ ಪುರ್ಬುಗುಮಾ'

೫ ಗ. ಮತ್ತು ಸೂ. ಸು. ೮, ೯೮ : 'ಸ್ಥಿತಿಯಿಂ'

೬ ಸೂ. ಸು. (೮, ೯೮) 'ಪುದುವಾಳ್ಗುಂ'

[1]ಮತಿವಂತೆಯು ಧರ್ಮಜ್ಞೆಯು |
[2]ಸತಿಭಕ್ತೆಯು ಸಂದ ಶೌಚವಂತೆಯು ಸತ್ಯಾ ||
ಸ್ಥಿತ ವಚನೆಯು ಕಥೆಯನೆ ಪೇ |
ಳ್ಗತಿಶಯದಿಂ ತನ್ನ [3] ವಧುಗೆ ಘಟಕುಚಯುಗಳೆ || ೧೮ ||

ಮತ್ತೇಭ ||

ಗುಣಮುಂ ಸುಂದರ ರೂಪಮುಂ ವಿಭವಮುಂ ಸೌಭಾಗ್ಯ ಲ[4] |
ಕ್ಷಣಮುಂ ಚಾರು ಚರಿತ್ರಮುಂ ಕುಲಮುಮೊಳ್ಪುಂ ಸತ್ಯಮುಂ ಧರ್ಮಭೂ||
ಷಣಮುಂ ಸಂದ ಪತಿವ್ರತಾ ಮಹಿಮೆಯುಂ ದಾನತ್ವಮುಂ ಪೆಂಪುಮಿಂ[5] |
ತೆನಿಸಲ್ಪೆಂಡಿರೊಳಕ್ಕುಮೆಯ್ದೆ[6] ಪುರುಷಂಯೋಚಿಪ್ಪುದೋವೋಜೆಯುಂ||೧೯||

ಕಂದ ||

ಸತಿಯುಂ ವಿಚಾರಿಪಾಗಳು |
ಯತಿಗಂಗೆಯೊಳವನಿಪತಿ ಭಗಂದರದೊಳುಮುಂ ||
ಪ್ರತಿದಿನ ಮಿಟ್ಟನ್ನಮನುಂ |
ಚ ತೆರಂ ತನಗಕ್ಕುಮುದರಿನಗಳ್ಪೊಡಪುವುದೆ[7] || ೨೦ ||

ಜನಿಯಿಸಿತಿಲ್ಲದ ನುಡಿರಾಗಮ |
ನಿನತನುಜೆಗಮಂತೆ ಪತಿಯು ಕೃತಮುಂ ಸತಿ ಪ್ರೊ ||
ಲ್ಲಿನಿಕು ಮತಿ ಘನತಿ ಸರ್ಪಂ |
ಖನತಿಯು ಕಥೆಯಂ ಮೃಗಾಕ್ಷಿ ನೀಂ ಕೇಳ್ದರಿಯಾ || ೨೧ ||

---

೧ ಸೂ. ಸು. (೪.೯೯) ' ಪತಿಭಕ್ತಿಯು '

೨ ಸದರ ' ಮತಿವಂತೆಯು '

೩ ಸದರ ' ಸತಿಗೆ ಪಂಡಿತನಪ್ಪಂ '

೪ ಸದರ (೮–೧೦೦) " ಸೌಭಾಗ್ಯಮುಂ (ಪಾಠಾಂತರ ಬಿನ್ನಾಣಮುಂ) ಭಾಗ್ಯಲ "

೫ ಸೂ. ಸು. ೮,೧೦೦ :— ದಾನತ್ವಮುಂ ಬಂಧುಲಕ್ಷಣಮುಂ ಪೆಂಡಿರೊಳಕ್ಕು

೬ ಸದರ :— ಪುರುಷರ್ ಯೋಚಿಪ್ಪುದೊಂದೋಜೆಯುಂ ||

೭ ಗ. ಮುದರಿನಗಳ್ಪಿಡಪವುದೆ

ಪಿರಿಯಕ್ಕರ ||

ನಿನಗೆ ಬೇಟಂಗೊಂಡಿರ್ದಪಳು ನಯದಿಂ ಕೇಳ್ಕಡು ಚೆಲ್ವರತಿಯನ್ನಳೆ
ತತಿಯನ್ನಳೆ ೧ |

ನಿನಗೆ ಬೇಟಂಗೊಂಡಿರ್ದಪಂ ಕಡುಚೆಲ್ವಂ ಕಾಮದೊಳ್ಕಾಮನಂ ಸಮನದೊ||
ನಿನಿಸಂ ಕರುಣವಿಲ್ಲದೆಸಡಮನ್ನೊಳಿನಿಂ ಚೋದ್ಯದ ರತಿ ಸುಖಮಂ |
ವಿನುತ ಭಾವಸಂಯೋಗಮಂ೨ ಮುಂಟಿಂದಿಂತು ಸ ದವರ್ಕಲಿಸುವರು-
ಪಾಂದವಂ || ೨೨ ||

ಉಜ್ವಳ ||

ಕುದಿರರೂಪಿನ ದೈವದೊಳಂ ಕೆರೆಯೆಳ್ತಲೆ ಮಾಡದೊಳ್ |
ಕದಿದ ಕಾಂಡ ಪಟಂಗಳೊಳು ವೇಲ್ಕಿ ನೊಜಟ್ಟಿದ ಕೊಣ್ಣದೊಳ್ ||
ಬಿದಿರ ಪೊಳೆಯೊಳಂ ನೆಲೆಗೆಲೊಳ್ಭಗ್ಗ ಕಡೊಳ್ಮಾಡ ನಿಟ್ಟುವೇಣ್ |
ಸುದತಿಯರ್ಕಳ ರೂಪಿನೊಳಂ ಮೆಯ್ಯೊಳೆಪೇಣ್ಬಂಚಿಸಿ ಸಾಣ್ಬನೊಳಾ
ಡುವರ್ || ೨೩ ||

ಮಲ್ಲಿಕಾಮಾಲೆ ||

೪ ತನ್ನ ರೂಪಿನ ಪೋಲ್ವೆ ಚರ್ಚಿಸಿ ದಾಸಿಯಂ ಪಡೆವೆಳ್ದು ತಾಂ ೫ |
೬ ಚೆನ್ನನಲ್ಲಿಗೆ ದಾಸಿಯಂದದಿ ಪೋಗಿ ರಾತ್ರಿಯೊಳಾಡುವರ್ ೭ ||
೮ ಭಿನ್ನ ಪಂಕಜವಕ್ತ್ರೆ ಕೇಳ್ವಧುವರ್ಕಳಾರುಮನಾವಗಂ |
ಬಿನ್ನಣಂ ಪೊರತೇನೊ ನಂಬದೆ ೯ನಂಬಿನಂದೆಸವಂ ವಿಟಂ ೧೦ || ೨೪ ||

---

೧ ಗ. ರತಿಯನ್ನಳೆ

೨ ಗ. ಸಂಯೋಗಮುಂಟಿಂದಿಂತು

೩ ಗ. ದೂದವರ್ಕಲಿಸುವರು

೪ ಸೂ. ಸು. ೮-೧೦೧ :-- ತನ್ನ ರೂಪನೆ ಪೋಲೆ ವಂಚಿಸಿ

೫ ಸದರ: ' ಪಡವೇಟ್ಟು ತಾಂ '

೬ ಸದರ: ' ಚೆ ನರಲ್ಲಿಗೆ '

೭ ಸದರ: ' ರಾತ್ರಿಯೊಳೊಂದುವರ್ '

೮ ಸದರ: ' ಚಿನ್ನ '

೯ ಗ. ನಂಬಿನಂದೆಸವಂ

೧೦ ಸೂ. ಸು. ೮-೧೦೧: ' ಬಿನ್ನಣಂ ಪೆರತುಂಟೆ ನಂಬದೆ ನಂಬಿದಂತೆಸೆವಂ
ಬುಧಂ || '

ಮನುಮತಮುಂ ವೇದಾಂತಾ
ದ್ಯನೇಕ ಧರ್ಮಾಗಮಂಗಳಂ ಕಲ್ತಿರ್ದಾ ॥
ಮುನಿಪರು [1] ಮಳಿಪುವರೆಂದಡೆ
[2]ಪನಿತೆಯರಳಿಪುವುದಿದೊಂದು ಚೋದ್ಯಮೆ ಜಗದೊಳ್ ॥೨೫॥

ಗೊರತಿಯು ಕಂತಿಯು ಕುಂಟಿಣಿ
ಯರ ಮುಂಡೆಯು ಮಾಲೆಗಾರ್ತಿಯುಸಗಿತಿ[3]ಯೋಗೀ ॥
ಶ್ವರಿಯರ ಕಿಡಿಕಿಯ ನಾದಿತಿ[4]
ಯರ ಮಂದಂ[5] ನುಡಿಯಲೀಯಲಾಗದು ವಧುವಂ ॥೨೬॥

ಗೊರವರ ಸವಣರ ದೋಬರ[6]
ತಿರಿವರ ತೆಲ್ಲಿಗರವಾದದವರ್ಗಳ ದೈವ ॥
ಜ್ಞಾರ[7] ಖಳರ ಜೋದುಗಾರರ
ನೆರೆವಿಗಳಂ[8] ಪೋಗಲೀಯಲಾಗದು ವಧುವಂ ॥೨೭॥

ಬಳರಿಯು ಸೋಂಪಿಗೆ ಬೀಡಿಗೆ
ಮಳಿವರ ಮನೆಗಳ್ಗೆ ಮದ್ಯಪಿಗಳಲ್ಲಿಗೆ ಕೋ[9] ॥
ಮಳೆಯುಂ ಪೋಗಲ್ಕಿತ್ತಡೆ
ಬಳರಿಗೆ ಪೂಯಲಿಡಹೋದ[10] ಕುರಿಯಂತಕ್ಕು ॥೨೮॥

---

೧ ಸವರ ೧೦೩ :— ಮಳುಪವರೆಂಬೊಡೆ
೨ ಸವರ : ರಳಪುವದದೊಂದು
೩ ಗ. ಸಗತಿಯೋಗೀ ಸೂ. ಸು. ೧೦೪ :— ಗಸಿತಿಯೋಗೀ
೪ ಸೂ. ಸು. ೮, ೧೦೪ :— ಶ್ವರಿಯರ ಕುಲಗೇಡಿಯನಾ-
೫ ಸವರ:— ವ ರೀತಿಯೊಳ್.... ಲೀಯಲಾಗದು ವಧುವಂ ॥
೬ ಸೂ. ಸು. ೮, ೧೦೫ :— ಸವಣರ ಕಷ್ಟರ
೭ ಸವರ :— ಜ್ಞಾರ ಜೂಜುಗಾಜರೆಂಬರ (ಜ್ಞಾರ ಖಳರ ಜೂಜುಗಾಜರ).
೮ ಸವರ : ನೆರವಿಗಳ ಪೊರ್ದಲೀಯ
೯ ಸವರ :— ಮದ್ಯಪಿಗಳೆಡೆಗೆ ಕೋ-
೧೦ ಸವರ :— ಪುಯ್ಯಲ್ಬಬಂದ ಕುಜಿಯಂತಕ್ಕುಂ ॥

ಕೋಳಲ ಬೆಡಂಬೆಯು ಪಗರಣ
ದಳಿಗಳ ಪರದ್ವೈವ ಮಾಡುವವರ್ಗಳ ಮಾತಿಂ ॥
ಗುಳಿಪರ ಪರಜಾತೆಯುವ
ರ್ಗಳ ತುಳಿಗಳ ದೆಸೆ ಜೋಗಲೀಯಲಾಗದು ವಧುವಂ ॥೨೯॥

ಬಡತನವಾದೊಡಂ ಸತತಮೊಲ್ಲದೊಡಂ ಸಮ ಸತ್ವರೂಪಮುಂ ।
ಪಡೆಯದೊಡಂ ಕರಂ ಪಲವು ಕಾಲಮುಗಲ್ದೊಡ ಮುಂದೆ ಕಾಪುಮಾ ॥
ಣ್ಡಡಮಣಮೇಪಮುಂ ಭಯಪುಮುಳ್ದೊಡಮಾಗಳು ಮೃಗನಾಭೊಡಂ ।
ಮಡದಿಗಮನ್ಯಚಿತ್ತ್ರಮ ದಲಕ್ಕುಮಿದಂ ಬಗೆ ಸೋಪದೇಶಮುಂ ॥೩೦॥

ರಥೋದ್ಧತೆ ॥

ದೂರದಿಂ ಕ್ಷಣವುಮುಂ ಕರಂ ಮನಃ
ಪ್ರೀತಿಯುಂ ಪೆರದೆದಲ್ಪತಿವ್ರತಾ ॥
ಸ್ವಿತೆಯರ್ಕುಲವಧೂಜನಂಗಳೇ
ಮಾತೊ ಪೇಳ್ ಶುಚಿಗಳಾನಿರಂತರಂ ॥೩೧॥

ಪಿರಿಯಕ್ಕರ ॥

ಪಲರೊಡನಿಪ್ಪ ಬೆಲಿವೆಣ್ಗಳಂ ಸರಾವಗಂ ಪರನೋರ್ವನಿಂ
ಕುಲವಧೂವ್ರಜಮುಂ ಸುಗುಮೆಂತೆನೆದರನುಂಬರ್ಕ್ಕೆಪೆಗಳಂ [೧] ॥
ಚಲದೆ ಬಯಸುವರಂತೆ ಸೀ ಮಾನವಾದೊಡಂ ಪರಪುರುಷಗತಿಯುಂ
ಕಾಂಕ್ಷಿ ಸುತಮಿರ್ಪರ್
ಜಲಜವದನೆ ಕೇಳದರಿಂದಂ ಸತಿಗೆ ಯತ್ನದಿಂ ಕಾಪಂ ಮಾಡುಗೆ
ಚದುರಂ ॥೩೨॥

ಲಲನೆಯರ್ಗೆ ರೂಪುಹೀನಂ
ಕುಲಹೀನಂ ವೃದ್ಧನೆಯ್ದೆ ಪಳೆಯುಂ ಶುಚಿಮೆ ॥
ಯ್ಗಲದಕ್ಷನೆನಿಸುವವನಂ
ನಿಲಿಸುಗೆ [೨] ಕಾಪಿಂಗೆ ಬುದ್ಧಿವಂತನನೆಂದುಂ ॥೩೩॥

---

೧ ಗ. ಮಧುವನುಂಬರ್ಕ್ಕೆಪೆಗಳಂ
೨ ಗ. ಸಲಿಸುಗೆ

೧ ಸರೋಗ ಚೌಪದಿಗೆಯುಮಕ್ಕುಂ
೨ರತಿಹೀನಂ ಪೆಳವಂ ಕುಬ್ಜಂ
ಮತಿವಂತಂ ಕೃಶನತ್ಯಂತಂ ||
ನೃತವಾಕ್ಯಂ ಸತಿಯುಂ ಕಾಯ
ಲ್ಕತಿಶಿಷ್ಟಂ ಪೆರತೇಂ ಶ್ರೇಷ್ಠಂ ||೨೪||

ವಸಂತ ||

ರೂಪು ಸ್ವಭಾವಯುತೆಗೊಳ್ಳಿದ ಕಾಪಿನಾಳಂ
ರೂಪ ಸ್ವಭಾವಯುತನಲ್ಲದ ಪಾಣ್ಬಸಿಂದಂ ||
ಕಾಪಾಳಮಾಳವರಿಯುಂಡಿನೆಯುಳ್ಳೆ ಪೇಳ್ದಂ
ಕಾಪಾಳ ಜಟಾಪಾದ ಸರೋಜ ಭೃಂಗಂ ||೨೫||

೩ ಚೆನ್ನಿಗನಂ ಯೌವನನಂ
ಕೊನ್ನಿಗನಂ ಪೊಂಬನಂ ಕರಂ ತೊಂಬನುಮುಂ ||
ತನ್ನಯ ಸುದತಿಗೆ ಕಾಪಿ
ಟ್ಟನ್ನಲ್ಲಳೆ ತನ್ನ ಮನೆಯೊಳಿಟ್ಟಂ ಕಿಚ್ಚಂ ||೨೬||

---

೧ ಗ. ಸರೋಜ

೨ ಪೂ. ಸು. (೮, ೧೦೯) ಈ ಪದ್ಯವು ಕಂದದಲ್ಲಿ ಹೀಗೆ ಕೊಡಲ್ಪಟ್ಟಿದೆ :—

ರತಿಹೀನಪೆಟಿವ ಕುಬ್ಜಂ
ಮತಿವಂತಂ ನಾಡೆವೃದ್ಧ ಕೃಶಗರ್ಹಿತನುಂ ||
ನತಿಯುಂ ಕಾಯಲ್ಕಕ್ಕುಂ
ರತಿರಾಗಗಳುಟಿದ ಕಾಪಿನಿಂ ನಿಂದಪರೇ ||

೩ ಪೂ. ಸು. (೮–೧೧೦):—

ಚೆನ್ನಿಗನಂ ಜಾವನಿಗನ
ನನ್ನಿಗನಂ ಪಾಣ್ಬನಂ ಕರಂ ಸೊಬಗನುಮಂ ||
ತನ್ನಯ ಸತಿಯರ್ಗೆ ಕಾಪಿಡೆ
ನಿರ್ಣಯದಿಂ ತನ್ನ ಮನೆಯೊಳಿಟ್ಟಂ ಕಿಚ್ಚಂ ||

[1] ಚರ್ಚನೆ ಗುಜುಗುಜು ಪಾಣ್ಬರೊ
ಳಚ್ಚುಂಬಕತಂ ಕರಂ [2] ತೊತ್ತಿನೊಳಂ ॥
ಪೆರ್ಚಿದ ಕಾಮುಕರಪ್ಪಲೊ
ಡರ್ಚಿದಳಟ್ಟಿಟ್ಟಿ ಪೆರರೊಳಾದೊಡಮಬಲೆ ||೩೭||

ಏಗೆಯ್ದುಂ ಕೂರ್ಪಂತೆಯೊ
[3] ಲಾಗಿರ್ಪಸ್ಥಾಂಬೆಯರ್ಕಳುಂ ತಪ್ಪಲ್ಕು ॥
ದ್ಯೋಗಂಗೆಯ್ದವಳುಂ ಕಾ
ರ್ಯಾಗಮದಾಪೇಕ್ಷೆಯಾಕೆಯುಂ ಮೃಗನಯನೆ ||೩೮||

[4] ಪರಪುರುಷ ಸಮಕ್ಷದೆ ಕಚ
ಭರಮಂ ನಿಟಿಲವಡವಾಮಕರದಿಂ ಮುಡಿಯುಂ ||
ಹರಿಣಾಕ್ಷಿ ಬಿಟ್ಟು ಮುಡಿವಡೆ
[5] ನಿರುತಂ ನೀಂ ಪಾಣ್ಬೆಯಂದು ಬಗೆಗಾ ವಧುವಂ ||೩೯||

[6] ಉಡಿಯುಂ ಸಡಲಿಸುವುಡುವಡೆ
ನಡೆನೋಳ್ಪಡೆ ತನ್ನ ಕಿವಿಯುಮಂ ತಲೆಯುಮನಂ [7] ॥
ತಡಿಗಡಿಗೆ ತುರಿಸಿಕೊಳ್ವಡೆ
ಪಡಿಮಾತೇಂ ನಿರ್ವಿಚಾರ [8] ಪುಂಶ್ಚಲಿಯಕ್ಕುಂ ||೪೦||

---

೧ ಸೂ. ಸು. (೮–೧೧೧) :—ಚರ್ಚನೆ ಗುಜುಗುಜು ಲೋಗರೊ । ಳಚ್ಚೊತ್ತಿಪ ತೆರದಿ ನೆರವು ತೊಟ್ಟಿರೊಳೀಗಲ್ ॥ ಪಚ್ಚುವ ಕಾಮಿಸಿ ತಪ್ಪಿಲೊಡಚ್ಚುಗವ ಳಟ್ಟಿಟ್ಟಿ ಪೆಱರೊಳಾದೊಡೆ ನಿರತಂ ॥

೨ ಗ. ಳಚ್ಚುಂಬ ಕುತಕಂ ಕರಂ

೩ ಗ. ಲಾಗಿರ್ಪಪಾರ್ಂಬೆಯರ್ಕಳುಂ ತಪ್ಪಲ್ಕು ।

೪ ಸೂ. ಸು. (೮–೮೬)— ಪುರುಷರ ಸಮಕ್ಷದೊಳ್ ಕುಚ । ಭರಮಂ ನೀವುವೊಡೆ

೫ ಸದರ—ನಿರಂತರಂ ಪಾಣ್ಬೆ—

೬ ಗ. ಉಡೆಯಂ ಸಡಲಿಸಿಯುಡುವಡೆ

೭ ಸೂ. ಸು. ( ೮–೮೭ ) ತಲೆಯುಮಂ ಕಿವಿಯುಮನಂ

೮ ಸದರ : ನಿರ್ವಿಚಾರದಱಿ ಪುಂಶ್ಚಲಿಯುಂ ॥

ಬಾಲಾಲಿಂಗನ ಚುಂಬನ
ಮಾಲೋಚಂ [1] ಹಾಸ್ಯಮಕ್ಕೆ ಸನ್ನೆಬದಿರ್ಜ ॥
[2] ಪ್ಲಾಳಾಪಂ ಪುಟ್ಟುಗುಮುದು
ಲೋಲೇಕ್ಷಣೆ ಪಾಣ್ಬನಿದಿರೊಳಸತಿಗಪೋಘಂ ॥೪೧॥

ವಿವಿಧಾನ್ನ ಪಾನ ಖಾನಾ
[3] ದ್ಯವಸ್ತ್ರ ಶ್ರೀಪ್ಪ ವಸ್ತು ಗಂಧ ಮಾಲ್ಯಾದಿಗಳಂ ॥
ನೆವಮಿಟ್ಟು ಪೆರರ್ಗೆ ಮಾಡಲ [4]
ಟ್ಟುವ ಪಾಣ್ಬೆಯ ತೆರನನರಿಗೆ ಪಾಲಿಸೆ ಚದುರಂ ॥೪೨॥

ಮೊಲೆಯುಂ ತೋಳಂ ನಾಭಿಯು
ನಲಘುನಿತಂಬಮುನನೇಕ ಭೂಷಣಮುಂ ಭ್ರೂ ॥
ವಿಲಸಿತಮುಂ ತೋರುವೊಡಂ
ಸುಲಬಾಲ್ಪ ದ್ರವ್ಯ ವಸ್ತುವಂ ಬೇಡುವೊಡಂ ॥೪೩॥

ತೇಂಕರಿಸಿಯುಗಳ್ವೊಡಂ ಬಿಡೆ
ಮಾಂಕರಿಪೊಡ ಮಾಸನ ಪ್ರಶಯ್ಯಾತಳದಿಂ ॥
ದಂ ಕಾಂತೆಯಿಳಿದೊಡಂ ಮೆ
ಯ್ಯಂ ಕೆಮ್ಮಗೆ ಮೂಲಿಯಿಡುವೊಡಂ ಪಚ್ಚುವೊಡಂ ॥೪೪॥

ಇರವಂ ಬಯಸುವೊಡಂ ಪರ
ಪುರುಷ ಸಮಕ್ಷಮೊಳಿಮೆಲ್ಲನಸತೀಭಾವಂ ॥
ಪುರುಷಂಗಿಂತಿಸಿತುಮುನಾ
ದರದಿಂ ಸತಿ ತೋರೆ ರಕ್ತಭಾವಂ ವನಿತೇ ॥೪೫॥

---

೧ ಸದರ (೮–೮೮): ಮಾಲೋಕಂ ಹಾಸ್ಯತಕ್ಕೆ

೨ ಗ. ಹ್ವಾಳಾಪಂ

೩ ಗ. ದ್ಯವಸ್ತ್ರವೇಷ್ಟನ ಸುಗಂಧ

೪ ಗ. ಕೂಡಲ

ಪರಪುರುಷರಲಿಂಗಿತವುಂ
ನಿರಂತರಂ ಮರಸಲೆಂದುಂ ತನ್ನ ಸತಿಗಂ ||
ಪೆರತೆನಿಪಡೆರೆಯುಂ ೧ ಬೊ
ಮ್ಮರಕ್ಕಸಂ ಕ್ಷೇತ್ರಪಾಲನೆಂಬರ್ಪೆಂಡಿರು ||೪೬||

ಪಿರಿಯಕ್ಕರ ||

ಎಲವೊ ನಲ್ಲನೆ ಕೇಳೊಂದು ಚೋದ್ಯಮಂ ಮೊಲೆಯಂ ಕೂಸುಣದು ಪಯ ನೀಯದು |
ತಲೆಬೇನೆಯ ಮೊಕ್ಕಳವಾಯಿತೀಗಳ್ ನಿನ್ನ ಮೊಗಂ ಕಂದಿ ಕುಂದಿದರ್ದುದು||
ಪಲವು ಕನಸಂ ಪೊಲ್ಲವಂ ಕಂಡಪೆಂ ಕೈತ್ತೈಯ ನೆರೆಯಪಂ ಮನೆಯ ದೈವಂ|
ಜಲಜಕ್ಕಿಯರ್ ನೋಂಕಿದರೆಂದಿಂದ ನೋಂಪಿಯ ನೆವದಿಂ ಧೂರ್ತೆಗೆ ಯ್ವರ್ ಸತಿಯರ್ ||೪೭||

ಪುಸಿಕಿಟ್ಟಮೆಯಂ ಮಾಳ್ಕಂ
ನಿಸದಂ ಕಿಟ್ಟಮೆಯ ನೈಯ್ದಿಲ ಕಸುಗುಮತ್ತಂ ||
ತೆಸಗುಂ ತನ್ನಂತಳ್ವಾ
ವ ನೋಂಕಿತೆಂದಳ್ತು ಜಾರೆ ತೆರಪಂ ಪಡೆಗುಂ ||೪೮||

ಅಸವನೆಗೆ ಕೆಯ್ಗೆ ತೋಂಟ
ಕ್ಕೆ ೨ ಸಿಂಹದ್ವಾರ ಗೃಹಕೆ ಪೊಲೆವನೆಗಾಳ್ಗಂ ||
ಬೆಸವೋದೆನೆಂದು ೩ ಪುಂಶ್ಚಲಿ
೪ ಸುಶೀಲೆ ಪೋಕುಂ ಪ್ರಯತ್ನ ಪರಸದನಕ್ಕೆ ಬುಧರ್೫||೪೯||

ಬಡತನಕೆ ಚಿಂತೆ ಪಣಮು
ಳ್ಳೆಡೆ ತನಗತಿದರ್ಪಮುನ್ನವಾಯಕ್ಕೆ ಗುಣಂ |
ಕಡುಲಲ್ಲೆಗೆ ಮುಳಿಸತಿಗೆ
ವಿಡಂಬಮಿವು ಸಹಜಮಲ್ತೆ ಭಾವಿಪೊಡೆಂದುಂ ||೫೦||

---

೧ ಗ. ನಾಡೆರೆಯಂ ಬೊ ೨ ಗ. [ಸ]ಮಗಾರ ಗೃಹಕೆ
೩ ಗ. ಬೆಸವೊಡೇನೆಂದು ೪ ಗ. ಸುಶಿಲ್ಗೆ ಪೊಕುಂ
೫ ಗ. ಪ್ರಯತ್ನಪರ . ನಕ್ಕೆ ಬುಧಂ

ಕೂಡಲ್ಪಡೆಯುದೊಡಂ ಮಾ
ತಾಡಿ ಮೊಗಂ ನೋಡಿಯುವನ ಗುಣವರ್ಣನಮಂ [೧] ॥
ಪಾಡಿಸಿ ತಣಿಗುಂ ಮಾತಂ [೨]
ನಾಡಾಡಿಯ ಪಾಂಬೆಗೊಳವು ಕುಟಿಲಮನೇಕಂ ||೫೧||

ಮತ್ತೇಭ ॥

ನಗೆಯಿಂ ನೋಟದಿನೋಳ್ಪಿನಿಂ ವಿಭವದಿಂ ಸೌಂದರ್ಯದಿಂ ಧೈರ್ಯದಿಂ[೩]
[೪] ಬಗೆಯಿಂ ಮೆಲ್ಪಿನಿಂಬಗೆಯ್ವರತಿಯಿಂ ಚಾತುರ್ಯದಿಂ ಸೌಖ್ಯದಿಂ ||
ಮಿಗಿಲಿಂತುಂ [೫] ಪೆರಗೇಂಗು ತನ್ನ ವಧುಮೆಚ್ಚುತ್ತಿರ್ಪಿನಂ ಮಾಳ್ಕೆ ಭಾ
ಷೆಗಳಿಂ ಪ್ರೇಕರದಿಂ[೬] ಕುಲಾಂಗನೆಗೆ ಹೃತ್ಸಂತೋಷವಂ ಮಾಡುಗುಂ ||೫೨||

ಕಂದ ॥

ಒಬ್ಬಳಿ ಸಾರ್ಗುಂ ಸಜ್ಜನ
ಮಿಬ್ಬರ್ನಿರ್ಬುದ್ಧಿಗಕ್ಕು ಮತ್ತಂ ಪ . . . ||
ನ್ನಿಬ್ಬರುಮಂ ಕುಲವಧುವಂ
ನೂರ್ಬರುಮಂ ಪಡೆದೊಡೆ ಕರಂ ಸುಖಂ ಬಡೆದಪನೆ ||೫೩||

ನರಪತಿಗಪರಿಮಿತಂ ಪೆಂ
ಡಿರದೆಂತೆನೆ ರಾಜಕಾರ್ಯ ಸಂವರಣಾರ್ಥಂ ॥
[೭]ದ್ವಿರದಗತಿವನಿತೆಯರ್ಕಳುಮನೇ
ಕರುಂ ಧರೆಯೊಳುಚಿತಮರಿ ಕಮಲಮುಖಿ ||೫೪||

---

೧ ಸೂ. ಸು. (೮-೯೧);— ....ಯುವರ ಗುಣವರ್ಣನಮಂ
೨ ಗ. ಮತ್ತಾಂ ಸೂ. ಸು (೮-೯೧) ಪಾಡಿಸಿ ಮತ್ತಂ ಪಣೆಯುವ
೩ ಸೂ. ಸು. (೮-೧೧೨) :— ಶೌರ್ಯದಿಂ
೪ ಸೂ. ಸು. (೮-೧೧೨) ಬಗೆಯಿಂ ಬಲ್ಪಿನಿನಿಂಬುಕೆಯ್ವ . . . . . ಶೌರ್ಯದಿಂ
೫ ಸೂ. ಸು. (೮-೧೧೨) ಮಿಗಿಲೀತಂ ಪೆರಗೇಂಬು ತನ್ನ ವಧುವಂ ಸಚ್ಚಿಪ್ಪಿಸಂ
೬ ಸೂ. ಸು. (೮-೧೧೨) ಪ್ರೇರಕದಿಂ ಕುಲಾಂಗನೆಗೆ ಹೃತ್ಸಂತೋಷಮಂ
ಸದ್ಬುಧಂ ||
೭ ಇದರ ಹಿಂದೆ 'ಕ' ಪ್ರತಿಯಲ್ಲಿ ಕೆಳಗಿನ ಎರಡು ಸಾಲುಗಳು ಅಪ್ರಸಕ್ತವಾಗಿ
ಬರುತ್ತವೆ :— ನೃಪತಿಗೆ ಸರಸಿರುಹಾನನೆ ಗುರುಕುಚಪ್ಸಯಘನ ಜಘನೆ

ಅನುಪಮ ಗುಣಯುಕ್ತೆಯು ತಾ [೧]
ನನುಕೂಲೆಯನಧಿಕ ಪುಣ್ಯಲಕ್ಷಣೆಯಂ ಮಾ ॥
ನಿನಿಯಂ ಸುರೂಪವತಿಯುಂ
ಜನಪಂ [೨] ಮಾಳ್ಕೆಂದುಮಾಕುಲಾಂಗಿಯು ಸತಿ ಕೇಳ್ ||೫೫||
ನಿರುಪಮ ಲಕ್ಷಣಯುತೆಯುರ್
ಸರೂಪೆಯು ನೃತ್ಯಗೀತ ವಾದ್ಯಾದಿಕಳಾ ॥
ಪರಿಣತೆಯುನರ್ಗನಾಂಗಿಯು [೩]
ರರಸಿಯುರತಿ ಮುಗ್ಧೆಯುರ್ಕಳಾಗಳವೇಳ್ಕುಂ [೪] ||೫೬||

ಪಿರಿಯಕ್ಕರ ॥
ಲಲನೆಯೋರ್ವಳ್ಗೆ ಪರನೋರ್ವನಾಗಿಯುಂ ಸುರತದೊಳಾಕೆಯುಂ ತಣಿಯಿಪಳಾರಂ |
ಪಲಬರಬಲಾಜನಂಗಳ್ಗೆ ಪರನೋರ್ವನಿನ್ನುರೆ ತಾ [೫]ತೃಪ್ತಿಯೇನಾದಪುದೇ||
ಜಲಜ ವದನೆಯರ್ ಬಾಲೆಯರುಂ ತುಂ ನಿರೋಧಗಾಮಿಗಳಪ್ಪ ಕಾಮಿಗಳಪ್ಪ ಕಾರಣದಿಂ |
ಕುಲಮನೊಳ್ಪುಮುಂ ಬಗೆಯದೆ ಲೌಲ್ಯೆಯುಂ ಸ್ಫುರಿಪಂದಾಸಂ[೬] ಮಾಳ್ಕೆ ಯತ್ನದಿಂ ||೫೭||

ಅನುಪಮುಪವರ್ಗಳ ಕಾಮುಂ
[೭] ಮನಸಿಜ ಸುಖಮಿಲ್ಲ ಸೆರೆಯೊಳಿರ್ಪುವರಿಂದಾ ||
ವನಿತೆಯರಿನ ಪಾಯುಂಗ
ಳ್ಜನಿಯಿಕುಮರಿದಾತ್ಮವಂತನಪ್ಪುದು ಚದುರಂ [೮] ||೫೮||

---

[೧] ಸೂ. ಸು. (೮-೧೧೩) :— ಅನುಪಮ ಗುಣಗಣಯುಕ್ತೆಯು
[೨] ಸೂ. ಸು. (೮-೧೧೩) :— ಮಾಳ್ಕುಂ ಕುಲಾಂಗನೆಯು ನಿಶ್ಚಯದಿಂ ॥
[೩] ಸೂ. ಸು. (೮-೧೧೪) :— ಪರಿಣತೆಯುರಸೂನಾಂಗಿಯು
[೪] ಸೂ. ಸು. (೮, ೧೧೪) ಯುರ್ಕಳಾಗಲೆ ವೇಡ್ಕುಂ ॥
[೫] ಗ. ಸುರತಾತೃಪ್ತಿ
[೬] ಗ. ಕಾಪಂ
[೭] ಸೂ. ಸು. ೮-೧೧೫ :— ಮನಕ್ಕೆ ಸುಖಮಿಲ್ಲ ನೆರೆಯೊಳಿಪ್ಪುವಜಿಂದಾ |
[೮] ಸೂ. ಸು. (೮-೧೧೫) ವನಿತೆಯರಿನಪಾಯುಂಗಳನಿತುಮನಜಿಗಾತ್ಮವಂ ತನಪ್ಪುದುಂ ಚದುರಂ ॥

[೧] ಮಜ್ಜನದ ಕರಗದ ತಪದ
ಸೆಜ್ಜೆಯ ಬಾಣಸದ ಬೆಸನುಮಂ ಕೋಶಮುಮಂ ದೇಶಮುಂ[೨] ||
[೩] ಸಜ್ಜನ ದೆರೆಯುಮಂ ಪೆರ
ತುಜ್ಜುಗಮಂ ಕೂರ್ತ ವಧುಗೆ ಕೆಟ್ಟುಂ ಕಟ್ಟುಂ || ೫೯ ||

ನೀತಿ ||

ಸೂಳೆ ಪಲರ್ವಿಟರೊಳ್ನೆರೆದಿರ್ಪ್ಪಾ
[೪] ದಾಳಿಪ ರೊಲ್ವವೊಲಿಲ್ಲರುಮಂ ಭೂ ||
ಪಾಲನು ಮಂತೆ ನಿಜಾಂಗನೆಯುಗ್ರಂ
ಸೂಳೆಗನಾಗೆ ಸುಖಂ ದೊರಕೊಳ್ಗುಂ || ೬೦ ||

ಒಲವೆಂದುಂ ನಿಲಲರಿಯದು
ಕೆಲವು ದಿನಂ ನಡೆಗು ಮದರಿನೊಳ್ದಾಗಳ್ತಾಂ ||
ಲಲನೆಗೆ ಪುರೋವೃದ್ಧಿಯ
ಪಲವಾಯುನಮಿತ್ರರಮವೆ ತಾಂ ಪಗೆಯಲ್ತೆ || ೬೧ ||

[೫] ಕಡುಗೂರ್ತಂ ಮೆಯ್ಯೆ ಮೊಕ್ಕಳಂ ಕನಕಮುಂ ತಾನೀಯಲಾಗಂ ಕರಂ |
ಕಡುಗತ್ಯುನ್ನತ ವಸ್ತ್ರಮುಂ ಘುಸೃಣಮುಂ ಕಸ್ತೂರಿಯುಂ ಪುಷ್ಪಮುಂ ||
ಮುಡಿಯುಂ ಚಂದನಮುಂ ಫಲಾವಳಿಗಳಂ ಕರ್ಪೂರಮುಂ ನಿಚ್ಚಲುಂ |
ಪಡಿಮಾತೇಂ ಪರಿರಕ್ಷೆಮಾಡೆ ವನಿತಾ ಸಂಗಕ್ಕೆ ಭೂಪಾಲಕಂ || ೬೨ ||

---

೧ ಗ. ಮಜ್ಜನದ ಕರಗದ ಪಡದ |

೨ ಇಲ್ಲಿ ವೃತ್ತವು ತಪ್ಪಿದೆ. ಗ. ಪ್ರತಿಯಲ್ಲಿ ಈ ಪದ್ಯದ ಮೊದಲಭಾಗವು ಹೀಗಿದೆ :— ಮಜ್ಜನದ ಕರಗದಪಡದ, ಸೆಜ್ಜೆಯ ಬಾಣಸದ ಬೆಸನುಮಂ ಕೋಶಮುಮಂ ಸೂ. ಸು. ೮, ೧೧೬ರಲ್ಲಿ:— ಬಾಣಸಿನ ಬೆಸನುಮುಂ ಕೋಶಮುಮಂ

೩ ಸೂ. ಸು. ೮, ೧೧೬:— ಬೆಜ್ಜತನದೆಡೆಯುಮಂ ಪೆಱ|

೪ 'ಕ' ದಲ್ಲಿ 'ಶೋಭಿಪರೊಲ್ವ' ಎಂದಿದೆ. ಇಲ್ಲಿ ದ್ವಿತೀಯಾಕ್ಷರ ಪ್ರಾಸವು ತಪ್ಪುತ್ತದೆ.

೫ ಸೂ. ಸು. ೮, ೧೧೮:—ಕಡುಗೂರ್ತೊರ್ಮೆಯೆ ಮೊಕ್ಕಳಂ ಕನಕಮುಂ ತಾನೀಯಲಾಗಲ್ಕರಂ | ಕೊಡುಗತ್ಯುತ್ತಮ ವಸ್ತ್ರಮುಂ.......ಪರಿರಕ್ಷೆಮಾಗೆ ವನಿತಾ ಸಂಘಕ್ಕೆ ಭೂಪಾಲಕಂ

ಪಲತೆರದ ತೊಡುಗೆ[೧] ಬಿಡುದಂ
ಬುಲವೊಳ್ಪೊಣೆಸುಗಳನೆಯ್ದೆ ಸಲಿಸುಗೆ ಕೂರ್ತಂ ||
ತಲಸದೆ ಸಂಭೋಗದೊಳಂ
ಪಲವುಂ ಬಿಸದದೊಳವರ್ಗೆ ಕಳೆವುದು ಪೊತ್ತ್ರಂ[೨] || ೬೩ ||
ಅವರವರ ಸೂಳು ಪಾಳಿಯ
ಸವಿಶೇಷಾನುಕ್ರಮಂಗಳಂಗಾಯುಮನು ||
[೩]ಕ್ಕಳಿಸದೆ ವನೆವಾಳಂ ಬಾ
ಳ್ವವನೆ ಕರಂ ಚದುರನವನಿವಳಯದೊಳೆಂದುಂ || ೬೪ ||
ಅವರ್ಗೆ ಬಹು ವ್ಯಾಪಾರಮು
[೪]ಪುವರ್ಗೆ ಪರಿಸ್ಕಂದಮುಂ ಪರಿಗ್ರಹಮುಂ ಬೇ ||
ಡವರಂ ಸಂಕುಚಿತದೆ ಸಂ
[೫]ತವಿಡಿಸಿ ಸಂತುಷ್ಟರಾಗೆ ಮಾಳ್ಪುದು ನರಪಂ[೬] || ೬೫ ||
ನಸುಸೋಂಕಿಯುಮೊಲ್ದುಂ ಬಂ
ದೆಸಗುವೊಡಂ ನೋಂಪಿ ಋತು ಮಹೋತ್ಸಹದೊಳಂ ||
[೭]ಪಸದನದೊಳವೊಡಗೂಡುವು
ದಸಿಯುಳ ಸೂಳಲ್ಲದೆನ್ನದೆಂದುಂ ಚದುರಂ || ೬೬ ||

ಇದು ಸಕಲ ವಿಬುಧಜನ ವಿತತಿ ಕಾವ್ಯಾಲಂಕಾರ ನೀತಿ ನಿಬಂಧನಮುಂ ಛಂದೋಮಹಾರ್ಣವಮುಂ ಕವಿತಾ ಮಹಾರ್ಣವಂ | ಚಂದ್ರರಾಜವಿರಚಿತಮಪ್ಪ ಮದನತಿಲಕದೊಳು ಪುಣ್ಯಾಂಗನಾವರ್ಣನಂ ಅಷ್ಟಮಾಧಿಕಾರಂ

ಶ್ರೀ ಶ್ರೀ ಶ್ರೀ

---

೧ ಸೂ. ಸು. ೮-೧೧೯:— ತೊಡಿಗೆ ಗ. ತೊಡುಗೆ.
೨ ಸೂ. ಸು. ೮-೧೧೯ ಪೊಟ್ತ್ರಂ
೩ ಇಲ್ಲಿ ದ್ವಿತೀಯಾಕ್ಷರ ಪ್ರಾಸ ತಪ್ಪುವುದು.
೪ ಸೂ. ಸು. (೮-೧೨೦) :— ಪರಿಸ್ಪಂದಮೆಂಬುದಂ ಮಾಡಲ್ ಬೇ
೫ ಕ. ತವಿವಿಸಿ, ಗ. ತವಿಲಿಸಿ.
೬ ಸೂ. ಸು. (೮-೧೨೦) ಚದುರಂ
೭ ಸೂ. ಸು. (೮-೧೨೧) :— ಬಸನದೊಳೋತೊಡಗೂಡುವ

# ನವಮಾಧಿಕಾರಂ

ಕುಲವಿಭ್ರಂಶೆಯುರೊಳ್ಕನೋಜ ಸುಖಮಂ ಮಾಳ್ಪಂಗೆ ಪೆಂಪೆಯ್ದುದು
ಜ್ವಲವೃತ್ತಂ ಕಿಡಿಗುಂ ಪರತ್ರೆಯುಳಿಗುಂ ಶೌಚಂ ಕಿಲುಂಬಕ್ಕುಮಾ ||
ಕುಲಟಾಸಂಗಮದಿಂದಮಾದ ತನುರಾಗೋತ್ಸಾಹಮಂ ಪೇಳಲಾ
ಗಿಳೆಯೊಳ್ಪೂರ್ವ ಮುನೀಂದ್ರ ಸಮ್ಮತಮಿದೆಂದಾಂ ಪೇಳ್ದಪೆಂ ಕಾಮಿನಿ
|| ೧ ||

ಪರವಧುವಂ ನಪುಂಸಕಿಯುರಂ ಗುರುಭಾರ್ಯೆಯುರಂ ಮುನೀಂದ್ರ ಸೌಂ
ದರಿಯುರನಂತ್ಯ ಜಾತಿಯವಳಂ ವ್ರತಮುಳ್ಳಳನಂಗಹೀನೆಯುಂ ||
ತಿರಿವವಳಂ ಕುಲಕ್ಷಯೆಯುನಾ ಕೊಡಗೂಸುಗಳಂ ವಿದಗ್ಧನಾ
ದರದೊಳೆ ಕೂಡಲುಂ ಬಯಸಿ ನೋಡಲುಮಾಗದು ಕೂರ್ತು ಬಂದೊಡಂ
|| ೨ ||

ಕಂದ ||

ಮೊರೆಯಿಲ್ಲದಳಂಗುಲಿಸಿಯು
ನರಿದುಂಬೆಯು ಹೊಕ್ಕದಿರ್ಗಳಂ[1] ಯೋಗಿನಿಯುಂ ||
ನೆರೆ ವಿಹಾಹುದಪ್ಪಿದಳಂ
ಪೆರತೇನೋ ವಯೋಧಿಕೆಯುಮಾಗದು ಕೂಡಲ್ || ೩ ||

ರಂಡೆಯೊಳಂ ಭ್ರಷ್ಟೆಯೊಳಂ
ಮುಂಡೆಯೊಳಂ ವ್ಯಾಧಿಯುತೆಯೊಳಂ ಲಲನೆ ಮರು ||
ಳ್ಗೊಂಡಳೊಳಂ ಲಿಂಗಿಯೊಳಂ
ಗುಂಡನೊಳಂ ನೆರೆದೊಡಳಿಗುಮಾಯುಂ ಶ್ರೀಯುಂ || ೪ ||

---

೧ ಗ. ಸೋಂಕದಿರ್ವಳಂ

ಮತ್ತೇಭ ||

ಪೆರರಾರುಂ ವಧುವಿಲ್ಲಮಪ್ಪುಡಿಸಿತಿನ್ನೊಂದಕ್ಕೆ ಮೇಣರ್ಥಮಿಾ
ತೆರದಿಂದೀ [1]ಪರಿಯಿಂದೆ ಸಾರ್ಕುಮೆನಗಿನ್ನೆ (ನ್ನೊ?)ಂದಕ್ಕೆ ರೂಪುಳ್ಳವ ||
ಳ್ಕಿರಿಯುಳ್ಳಂಟರನೇಕರಪ್ಪೊಡ[2]ಮಿದಕ್ಕಂ ನಾಲ್ಕು ಭೇದಂಗಳಿಂ
ಮರುವಾಳಂ ಮರುವಾಳ್ತೆಯೊಳ್ಸಲಿಸುವಂ ಪ್ರೌಢಂ ಸರೋಜಾನನೆ || ೫ ||

ಕುಲಟಾ ನಾರಿಯು ನಾಣು ಮುನ್ನತಿಯುಮೊಳ್ಪುಂ ಶೌಚಮುಂ ಧರ್ಮಮುಂ
ಚಲಮುಂ ಮುನ್ನಮೆ ಕೆಟ್ಟು ಪೋದುದರಿ[3] ನಾರಾರೋಲೆಯುಂ ತಾಂ ಸಿರಂ-||
ತರಮುಂತುಂ ಕಡುಕೆಟ್ಟು ಪೋಕುಮದರಿಂದಂ ಯತ್ನದಿಂ ಕಾಪುಮಾ
ಡಿ ಲಸತ್ಕಾಮ ಸುಖಂಗಳಂ ಸಲಿಸುಗುಂ[4] ಚಂದ್ರಾಸ್ಯೆಯೊಂದಿಚ್ಛೆಯಿಂ || ೬ ||

ಮನಮುಂ ಬೇಸರಸಾಸರಂ ಬಗೆಗಳಂ ಕ್ಷುದ್ರಂಗಳಂ ತನ್ನ ವಾ
ಚನಮಂ ನಿರ್ಗುಣಮುಳ್ಳುದು[ಂ] ಸತಿಗೆ [5]ಪೇಳಲ್ವೇಡನಾಸಾರಿಸ ||
[6]ರ್ವಂಗಳವಕ್ಕೆ ಮಂಗಳನಮಂ ಭಾವಾಂಗಿತಾಸೀಕಮಂ
ಮನದೊಳ್ತುಂಬಿದೆ[7] ಮಾಳ್ಕು ನೊಪ್ಪಿನೊಳೆ ದಲ್ಕಾಮೋಚಿತಾ ಪಾಯಮಂ
|| ೭ ||

ಕಂದ ||

ರೂಪಂ ಪಳಿಯದೆ ಕೆಮ್ಮಗೆ
ಕಾಪಳಿದಿಳಿಕೆಯ್ದು ಬಳಿಕ ಬೈಯದೆ ಮುಖದೊಳ್ ||
ಕೋಪಂಗೆಯ್ಯದೆ ಮಧುರಾ
ಳಾಪದೆ ಮುತ್ತುವುದು ನೆರನನೆತ್ತದೆ ವಧುವಂ || ೮ ||

---

೧ ಗ. ಸತಿಯಿಂದೆ ೨ ಕ. ಂಳ್ಕಂಟರನಪರನಪ್ಪೊಡ . . .
೩ ಗ. ಪೋಪುದರಿ
೪ ಗ. ಸವಿಸುಗುಂ ೫ ಗ. ಪೇಳಲ್ವೇಡ ನಾನಾಕೆಗು | ಳ್ಪಸಿಗರ್ವಂಗಳಮುಕ್ಕೆ
೬ ಇಲ್ಲಿ ದ್ವಿತೀಯಾಕ್ಷರ ಪ್ರಾಸವು ತಪ್ಪುತ್ತದೆ. ೭ ಗ. ಳ್ತುಂಬಿದ

ಹರಿಣಾಕ್ಷಿಗೆ ಪದೆವುಂ[1]ರಾ
[2]ಗರತೋತ್ಸಾಹಮುಮನೆಯ್ದೆ ಪಡೆದೇಂ ಬಳಿಕಾ ||
ತುರನಾಗದೆ ಕೂಡಿದರ್ಾ
ದರಿಪುದು [3]ಚದುರಿಂಗೆ ಜೇರೆ ಬಿನ್ನಣಮುಂಟೇ || ೯ ||

ಮೋಗಂ ತೋರದೆ ನಲ್ಮೆಯು
ನಾಗಳು [4]ನೊಲಿದಂತೆ ಮಾಡಿ ಸುರತೋತ್ಸವದೊಳು ||
ರಾಗಮನೆ ಪಡೆದು ಗೆಯ್ವುದು
ಬೇಗಂ ಮರುವಾಳ್ತಿಯುಪ್ಪವಂ ಚದುರವಿಟಂ || ೧೦ ||

ಇದು ನಿಖಿಲ ವಿಬುಧ ಜನ ವಿನುತ ಕಾವ್ಯಾಲಂಕಾರ ಸೀತಿ ಬಂಧನ ಚಂದ್ರರಾಜವಿರಚಿತಮಪ್ಪ ಮದನತಿಲಕದೊಳು ಕುಲಸ್ತ್ರೀ ವರ್ಣನಾ ನವಮಾಧಿಕಾರಂ ಸಂಪೂರ್ಣಂ ಮಂಗಳಮಹಾ

ಶ್ರೀ ಶ್ರೀ ಶ್ರೀ ಶ್ರೀ

---

೧ ಸೂ. ಸು. ೮–೧೨೨ :– ಪದಪಂ

೨ ಸೂ. ಸು. ಸದರ :– ರಾಗ ರತೋತ್ಸವಮುಮನೆಯ್ದೆ ಪಡೆದಿಂ ಬಳಿಕಾ ||

೩ ಸೂ. ಸು. ಸದರ :– ಚದುರಂಗೆ ಬೇಱೆ ಕೋಣೆರಡೊಳವೆ ||

೪ ಗ. ನಾಗಳುಮೊಂದಂತೆ

# ದಶಮಾಧಿಕಾರಂ

ಪಲರ್ಗಂ ಕಾಮಸುಖಾರ್ಥಮಿತ್ತಿನನೊಳಿರ್ಪಂತುಂ ಸಮಂತಾರೊಳಂ
ಚಲಮಂ [1]ಕೋಪಿಯು ಮಾಗದಂತೆ ಪಡೆದಂ ಪದ್ಮಾಸನಂ ವೇಶ್ಯೆಯಂ||
ಸಲೆ ಲೌಲ್ಯತ್ವದೆ ನಾಲ್ಕುವರ್ಣದವರ್ಗಳ್ಮಾರ್ಗಂಗಳಂ ಲಜ್ಜೆಯಂ
ಕುಲಮಂ ದಾಂಟಿ ಕೆಲರ್ವಿಳಾಸಿನಿಯರಾದರ್ವಿಶ್ವ ಭೂಭಾಗದೊಳ್ ||೧||

ಕೋಕಿಳ ||

ಮೊದಲೊಳಪ್ಸ ಕುಳದೇವತಾಪ್ಸರೋಭ್ಯುದಯಮಂ ಕಮಳಯೋನಿಮಾಡೆ ಪು
ಟ್ಟಿದರವರ್ಗೆ ಕೆಲಬರ್ಧರಿತ್ರಿಯೊಳ್ ಸದಮಳಾಂಶಕೆಯರಿಂತು ವೇಶ್ಯ-
ಯರ್ ||
ಚದುರರ್ಪಲಬರ್ ಮುನ್ನಂ ಪದವಿಟ್ಟುಸೂಳೆಯರ್ಸಮಂತವರಂ ಗೆಲ್ವುದು
ಕರಮು
ರಿದಬಲೆಯು ಗೆಲ್ವುದು ಸಲೆ ಮದನಾಭಿರಾಮನೋಜೆಯೊಳಿಂದಂ || ೨ ||

ಪರಿಯಣದ[2] ಪಡಿಗದಡಪದ
ಕರಗದ ಬಾಣಸದ ಮಜ್ಜನದ ನಾರಿಯ ತೊ ||
ತ್ತಿರ [3]ಪಿಂಡವಾಸದೊಳು ವೆಂ
ಡಿರ ತಂಡಮನೊಲ್ದು ನೆರದವಂಗಳಿವಕ್ಕುಂ || ೩ ||

ಉಂತುಂ ಸ್ವೇಚ್ಛಾರತಿ ತನ
ಗೆಂತುಂ ದೊರಕೊಳ್ಳದೆಂತು ಮೆಚ್ಚಿಸಲಾರಂ ||
ಭ್ರಾಂತೇಂ ಪ್ರಾಣದಿನರ್ಥದಿ
ನಂತಾತಂ ಕಿಡುಗುಮಳಿಪಿನೆರೆದಂದವರಂ || ೪ ||

---

೧ ಗ. ತೋಟಿಯು
೨ ಗ. ಪರಿಗದಡಪದ
೩ ಗ. ಪೆಂಡವಾಸ

ಇದುವೆಯರ್ಧಪದಾಂತಯಮಕಮುಕ್ತಂ

ಕನಿಷ್ಠೆಯುಂ ನಿಷ್ಠುರೆಯುಂ ಸಕೋಪೆಯುಂ
ನ್ಯೂನಾಂಗಿಯುಂ ಪೋಪುದೆ ಬುದ್ಧಿವಂತಂ

ಕಿರ್ಗೊರ್ತ್ತಿನ ಕಂದ ॥

ದೂರುಂ ದೂರ್ಕುಗಂ ದುಷ್ಟಂ
ನೂರುಂಟು ಕುರೂಪುಕುತ್ಸ್ನ ಮುದುಗುರು ಗುರುಕುಂ ॥
ಸೂರುಳು ತುಂ ದುಷ್ಟುಂತುಂ
ದೂರುವುದುಂ ಮುನ್ನಮುಂತುಸುಡು ಭೂತುಂತುಂ ॥ ೫ ॥

ತೆರಪನೆ ಪಾರ್ವಗಳ್ಪೊಲ್ಲಮೆ
ಯರಿದಡೆ ಹರದರ್ಗೆ ಪೇಳ್ದು ಛಿದ್ರಿಸುವಳು ಜೇ[೧] ॥
ಸರಿಪಳ್ಕೊಂಡುಳಿವಳ್ಕರ
ಮರುಗಿಲಿಯೆನಿಪಾಕೆ ಮೃತ್ಯುವಲ್ಲದೆ ವಧುವೆ ॥ ೬ ॥

ಎಡರಡಸಿದೊಡೊಡಮೆಯೊಳಳಿ
ವೊಡರಿಸಿದೊಡೆ ತನ್ನನಿತ್ತು ಕಾವಳ್ತಪ್ಪಂ ॥
[೨]ಕಡೆಗಣಪಳ್ಪೊಲ್ಲಮೆಗಳ
[೩]ನಡಂ ನಿಪಳ್ಭಕ್ತಿಯೆನಿಪ ಸೂಳೆಯೆ ಪೂಜ್ಯಂ ॥ ೭ ॥

[೪]ಕೆಳೆಯರ ನಂಟರ ನವನಂ
ಪಳಿವವಳಂ ಪೋಗಲಾಗದವರ್ಗಳನಳಿಪಂ ॥
ಕೆಳೆಯನ ಸಖನಂ ಬೆರಸದೆ
ಕಳಿವುವಲಂಬಿಕೆಯೆ ಪೂಜ್ಯವಬ್ಜದಳಾಕ್ಷಿ[೫] ॥ ೮ ॥

---

೧ ಗ. ಛಿದ್ರಿಸುವಳ್ಪೇ-
೨ ಗ. ಕಡೆಗಳಿಸಲ್ಪೊಲ್ಲಮೆಗಳ
೩ ಗ. ನಡಂಗಿಪಳ್ಭಕ್ತಿಯೆನಿಪ.
೪ ಕ. ಕೆಳೆಯರ ನಂಟತನವನಂ ೫ ಕ. ದಳಾಯತಾಕ್ಷಿ

ಇದುವೆ ಗತಪ್ರತ್ಯಾಗತಮುಂ, ಮುರಜಬಂಧಮುಂ. ಕಿರಿಯ ಸರ್ವತೋ ಭದ್ರಮುಂ ಮಹಾಯಮಕಮುಮಕ್ಕುಂ ||

[೧] ಕುಸುಮಾಮನೋಹರಂ
ಕುಸುಮಾಮನೋಹರಂ
ಕುಸುಮಾಮನೋಹರಂ
ಕುಸುಮಾಮನೋಹರಂ ||

ವಸುಮತಿ || ಇದುವೆ ತ್ರಿಸಮಯಮಕ್ಕುಂ ||
ದತಪನೆನೆ ರಪನೆನೆ
ಮದಿನೆನೆ ಮದಿನೆನೆ[೨] ||

[೨] ದತಪನೆನೆ ಮದಿನೆನೆ ಮದಿನೆನೆ |
ವಸುಮತಿ ರಾಜಿತಂ ವಸುಮತಿ ರಾಜಿತಂ
ವಸುಮತಿ ರಾಜಿತಂ ಕುಸುಮ ಬಾಣೋಪಮಂ || ೯ ||

ಇದುವೆ ಗತಪ್ರತ್ಯಾಗತಮುಂ ವೃತ್ತಬಂಧಮುಂ ಅರ್ಧಜತ್ತ್ರರಟ್ಟೆಮು[೩] ಮಕ್ಕುಂ

ತನುಪರನರಹದಿನರಪತಿ | ಮನುನಯನ ಶುಭಾಶುಭಂ ನಿಜವನದಂ |
ದನದ ಜನಿಭಂ ಶುಭಾಶುನ | ಯನನುಮತಿ ಪರನದಿಹರನರಪನುತಂ||೧೦||

ಅರ್ಧ ಕಂದ ||

ಎಂದು ನುಡಿವವಳಿ ಪೂಜ್ಯಂ
ಮಂದಸ್ಮಿತವದನೆ ಭಾವಿಸತಿಶಯದಿಂದಂ || ೧೧ ||

---

೧ ಗ. ಈ ಭಾಗವು ಕ. ಪ್ರತಿಯಲ್ಲಿಲ್ಲ. ಗ. ದಿಂದ ಆಯ್ದು ಹಾಕಿದೆ.
೨ ಇದು ಕ. ಪ್ರತಿಯಲ್ಲಿ ಉಂಟು.
೩ ಕ. ಅರ್ಧಜತ್ತ್ರರಟ್ಟೆಯುಮಕ್ಕುಂ

ಸ್ವಾಗತ ||

ಊಪ್ಪಡಂ ತುಡುಗೆ ಜವ್ವನವಾದಂ
ಕಪ್ಪುರಂ ಮೃಗಮದಂ ಸುಲಿಪಲ್ಲೇ ೧ ||
ಸಪ್ಪ ಸಾದು ಬಿಡುದಂಬುಲಮೆಂದುಂ
ತಪ್ಪದುಳ್ಳವನೆ ಸಂದ ಭುಜಂಗಂ || ೧೨ ||

ವಿವಿಧಗುಣಂ ನಾಗರಿಕ ವಿ
ಟ ವಿದೂಷಕ ಪೀಠವರ್ಧನಂ ಪರಿವೃ [ವ್ರ್ಟ್*] ತ್ಯಾ ||
ಗಿ ವಿವೇಕಿ ಭೋಗಿ ಚೆಲ್ವಂ
ನವಯೌವನನರುಜನರ್ಥಪರಿ(ತಿ?) ವೃಷಸತ್ವಂ || ೧೩ ||

ಮಯೂರಕ್ರೀಡೆ ||
ಇದುವೆ ಯೆರಡು ಕಂದಮುಂ ದ್ವಿಪದಿಕೆಯುಂ ಗೀತಿಕೆಯುವ್ವೈದುಮಕ್ಕ
ರಮುಮುಕ್ಕುಂ

ಧುರದೊಳಗಿಂದ್ರಸುತನೆನೆ
ಪರನಾರಿಗೆ ವಾಯುಜ ಸ್ವಯಂ ತಾನೆನಲು– ||
ರ್ವರೆಗೆ ಗಿರಿಜಾತ್ಮಭವನೆನೆ
ವರ ವಿಕ್ರಮನುನ್ನತೋನ್ನತಂ ತಾನೆನಿಕುಂ || ೧೪ ||

ಪರಮ ಹರಭಕ್ತನಿವನೆನೆ
ದೊರೆಯುಂ ಗುಣಿಯೂರ್ಜಿತಂ ನಯಜ್ಞಂ ಸುಭಟಂ ||
ಕರಮೆ ಚರಿತಾರ್ಥನತಿರುಚಿ
ಹರಿಸಾಹಸನೀಶ್ವರಂ ಸ್ಮರಂ ಸಚ್ಚರಿತಂ || ೧೫ ||

ಪಿರಿಯಕ್ಕರ ||
ದೀಪಮುಂ ಜನಂ ಮುಖವಾಸವಾಗಿನಂ[2]ಲವಣಮುಂತರ್ವರ್ತ್ತಿ[3] ಘುಟಿತಿ ಸುಣ್ಣಂ
ಧೂಪವೆಲೆಪಿಂಟು ಹಸ್ತದ್ರಾವನೆಯಂತ್ರ ವುರಿಲಿ ಮಾಲ್ಪಮಂಡಿಪಾನಂ ||

೧ ಗ. ಸುವಿಪಲ್ಲೇಸಪ್ಪ
೨ ಗ. ಮಾಸನಂ
೩ ಗ. ಮಂತರ್ವರ್ತಿ ಘುಟಿಕಿಸುಣಂ

ಲೇಪಮುಂಗಜೋದ್ಭವ ಮುದ್ರೆ ತಿಲಕಂ ಭೂಭಳಮಿವು ಮೊದಲಾಗೆ ಸಂಧಿ
ಸೋಪದೇಶಮುಂ ಮನುಮಾರ್ಗಮನೋದಿಸೊಳ್ಕೇಳ್ದು ಕಲ್ತು
ಕೊಂಡರಿವುದು ಚದುರನಪ್ಪಂ || ೧೬ ||

ಕಂದ ||

ಒಡನಾಡಲ್ಪಾಡಲ್ ಮೊಡ
ಲ್ಪಡಿಸಲ್ಕೊಳಲೊಸೆದು ಕುಡಲು ನಗಿಸಲ್ಕಾಡಲ್ ||
ನುಡಿಯುಲ್ಜೂದಾಡಲ್ಕಾ-
ರ್ತಡೆ ಕೂಡೆ ಮನಮನರಿಯಲರಿವುದು ಚದುರಂ || ೧೭ ||

ವರಸೂಪಶಾಸ್ತ್ರಭೃಗುಚಿ[1]
ತ್ರ ರಸಾಳಂಕಾರ ಗಣಿತ ಗಜ ಹಯ ವೈದ್ಯಂ ||
ಸ್ವರ ಶಕುನ ಕಾವ್ಯ ನಾಟಕ
ಭರದಿ ಕಳಾವಿದನೆನಿಪ್ಪುದತಿ ಚದುರವಿಟಂ || ೧೮ ||

ವನಿತಾಜನಮುಂ ಬರಿಪುದು
ಮನೆಗೆ ತದಾವಾಸ ಗಮನಮುಂ ಮಾಣ್ಬುದದೇ ||
ಕೆನೆ ತನಗಪಾಯ ಬಹಳಂ
ಜನಿಯಿಕುಮಭಿಮಾನಮುಂ ವಿವೇಕಮುಮಳಿಗುಂ || ೧೯ ||

ತನಗೆ ಮನೆಯಿಲ್ಲದಿದರ್ೊಡ
ಮನೇಕ ದೇಶಪ್ರವಾಸ ಮಾಡದೊಡಮನಳಿದಿ ||
ರ್ದನೇಕ ತನಕ್ಕೆ ಕೈಗೈ
ದು ನಿಳೆಯ ಪದನರಿದು ನೆರೆದು ಗೈವುದು ಚದುರಂ || ೨೦ ||

ಸಂದಣಿಯಿಲ್ಲದೆ ಸೋಂಕಿನೊ
ಳೊಂದದೆ ನಡೆಬೀದಿಯಲ್ಲದಿದರ್ುದನೆಂದುಂ ||
ಬೆಂದವರಲ್ಲದೆ ಸೌಷ್ಟವ
ದಿಂದೊಪ್ಪುವ ದೆಸೆಯೊಳೆಸೆಯೆ ಮಾಡುಗೆ ಮನೆಯುಂ ||೨೧||

---

೧ ಗ. ಭೃಗುಚಿತ್ತರಸಾ

